# ಡಾ. ರಾಗೌ ರ ಕಾವ್ಯಗಳಲ್ಲಿ ಆಧ್ಯಾತ್ಮ ಮತ್ತು ಆತ್ಮ ನಿವೇದನೆ

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. (ಕನ್ನಡ) ಪದವಿಗಾಗಿ
ಸಾದರಪಡಿಸಿದ
ನಿಬಂಧ


ಸಂಶೋಧನ ವಿದ್ಯಾರ್ಥಿ

**ಸುಜಾತ.ಹೆಚ್.ಎಸ್.**

ನೋಂದಣಿ ಸಂಖ್ಯೆ : ೧೮೧೨೦೧೦೩೦೦೩೩

ಮಾರ್ಗದರ್ಶಕರು

**ಡಾ. ಎ.ಆರ್.ಮದನ್‌ಕುಮಾರ್**

ಕನ್ನಡ ಸಹ ಪ್ರಾಧ್ಯಾಪಕರು
ಮಹಿಳಾ ಸರ್ಕಾರಿ ಕಾಲೇಜು, ಮಂಡ್ಯ





ಅಧ್ಯಯನ ಕೇಂದ್ರ

**ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನ ಕೇಂದ್ರ,**
**(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)**
**ಕರ್ನಾಟಕ ಸಂಘ (ರಿ.), ಮಂಡ್ಯ**

ಕನ್ನಡ ವಿಭಾಗ,
ಕನ್ನಡ ವಿಶ್ವವಿದ್ಯಾನಿಲಯ
ಹಂಪಿ





೨೦೧೮-೧೯

# ಡಾ. ರಾಗೌ ರ ಕಾವ್ಯಗಳಲ್ಲಿ ಆಧ್ಯಾತ್ಮ ಮತ್ತು ಆತ್ಮ ನಿವೇದನೆ

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. (ಕನ್ನಡ) ಪದವಿಗಾಗಿ
ಸಾದರಪಡಿಸಿದ
ನಿಬಂಧ


ಸಂಶೋಧನ ವಿದ್ಯಾರ್ಥಿ

**ಸುಜಾತ.ಹೆಚ್.ಎಸ್.**

ನೋಂದಣಿ ಸಂಖ್ಯೆ : ೧೮೧೨೦೧೦೩೦೦೩೩

ಮಾರ್ಗದರ್ಶಕರು

**ಡಾ. ಎ.ಆರ್.ಮದನ್‌ಕುಮಾರ್**

ಕನ್ನಡ ಸಹ ಪ್ರಾಧ್ಯಾಪಕರು
ಮಹಿಳಾ ಸರ್ಕಾರಿ ಕಾಲೇಜು, ಮಂಡ್ಯ





ಅಧ್ಯಯನ ಕೇಂದ್ರ

**ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನ ಕೇಂದ್ರ,**

**(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)**

**ಕರ್ನಾಟಕ ಸಂಘ (ರಿ.), ಮಂಡ್ಯ.**

ಕನ್ನಡ ವಿಭಾಗ,
ಕನ್ನಡ ವಿಶ್ವವಿದ್ಯಾನಿಲಯ
ಹಂಪಿ



೨೦೧೮-೧೯

# ಮಾರ್ಗದರ್ಶಕರ ಪ್ರಮಾಣ ಪತ್ರ

*******

೨೦೧೮-೧೯ನೇ ಸಾಲಿನಲ್ಲಿ ನೋಂದಣಿ ಸಂಖ್ಯೆ **೧೮೧೨೦೧೦೩೦೦೩೩೮** ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಯ ವಿದ್ಯಾರ್ಥಿನಿಯಾದ **ಸುಜಾತ.ಹೆಚ್.ಎಸ್.** ಅವರು ನನ್ನ ಮಾರ್ಗದರ್ಶನದಲ್ಲಿ **ಡಾ. ರಾಗೌ ಅವರ ಕಾವ್ಯದಲ್ಲಿ ಆಧ್ಯಾತ್ಮ ಮತ್ತು ಆತ್ಮನಿವೇದನೆ** ಎಂಬ ವಿಷಯವನ್ನು ಆಯ್ಕೆಮಾಡಿಕೊಂಡು ಸಂಶೋಧನಾ ನಿಬಂಧವನ್ನು ಸಿದ್ಧಪಡಿಸಿರುತ್ತಾರೆ.

ಈ ಸಂಶೋಧನಾ ನಿಬಂಧವನ್ನು ಶ್ರೀಯುತರು ಈ ಮೊದಲು ಭಾಗಶಃವಾಗಲಿ, ಪೂರ್ಣವಾಗಿಯಾಗಲಿ ಯಾವುದೇ ಪದವಿ ಅಥವಾ ಡಿಪ್ಲೋಮೋಗಳಿಗಾಗಲಿ ಒಪ್ಪಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಮಾರ್ಗದರ್ಶಕರ ಸಹಿ

ದಿನಾಂಕ : 14/11/2019.

ಸ್ಥಳ : ಮಂಡ್ಯ

**(ಡಾ. ಎ.ಆರ್.ಮದನ್‌ಕುಮಾರ್)**

ಕನ್ನಡ ಸಹ ಪ್ರಾಧ್ಯಾಪಕರು

ಮಹಿಳಾ ಸರ್ಕಾರಿ ಕಾಲೇಜು,

ಮಂಡ್ಯ.

ಡಾ. ಎ.ಆರ್. ಮದನಕುಮಾರ್
ಕನ್ನಡ ಸಹ ಪ್ರಾಧ್ಯಾಪಕರು
ಮಹಿಳಾ ಸರ್ಕಾರಿ ಕಾಲೇಜು
ಮಂಡ್ಯ-೫೭೧೪೦೧

# ಸಂಶೋಧಕರ ಪ್ರಮಾಣ ಪತ್ರ

*******

ಹಂಪಿ ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘದ ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ ೨೦೧೮-೧೯ನೇ ಸಾಲಿಗೆ ಕನ್ನಡ ಎಂ.ಫಿಲ್. ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು **ಡಾ. ರಾಗೌ ಅವರ ಕಾವ್ಯದಲ್ಲಿ ಆಧ್ಯಾತ್ಮ ಮತ್ತು ಆತ್ಮನಿವೇದನೆ** ಎಂಬ ವಿಷಯವನ್ನು ಆಯ್ಕೆಮಾಡಿಕೊಂಡು **ಡಾ. ಎ.ಆರ್. ಮದನ್‌ಕುಮಾರ್**‌ರವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಗಲಿ, ನಿಬಂಧದ ಯಾವುದೇ ಅಧ್ಯಾಯವನ್ನಾಗಲಿ ಬೇರೆ ಯಾವ ಗ್ರಂಥಗಳು ಹಾಗೂ ನಿಯತಕಾಲಿಕೆಗಳಲ್ಲಿ ಪ್ರಕಟಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತಿದ್ದೇನೆ. ಕನ್ನಡ ವಿಶ್ವವಿದ್ಯಾಲಯವು ನೀಡುವ ಎಂ.ಫಿಲ್. ಪದವಿಗಾಗಿ ಈ ನಿಬಂಧನವನ್ನು ಒಪ್ಪಿಸುತ್ತಿದ್ದೇನೆ.

ದಿನಾಂಕ : 14/11/2019. ಸಂಶೋಧನಾ ವಿದ್ಯಾರ್ಥಿ ಸಹಿ
ಸ್ಥಳ : ಮಂಡ್ಯ

Sujatha. H.S.
(ಸುಜಾತ.ಹೆಚ್.ಎಸ್.)
ನೋಂ.ಸಂ. ೧೮೧೨೦೧೦೩೦೦೩೩
ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ,
(ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದಿದೆ)
ಕರ್ನಾಟಕ ಸಂಘ (ರಿ.), ಮಂಡ್ಯ.

# ಡಾ. ರಾಗೌ ಅವರ ಕಾವ್ಯದಲ್ಲಿ ಆಧ್ಯಾತ್ಮ ಮತ್ತು ಆತ್ಮ ನಿವೇದನೆ

## ಪರಿವಿಡಿ

# ಪೀಠಿಕೆ

ಡಾ.ರಾಗೌ ಅವರ ಕಾವ್ಯದಲ್ಲಿನ ಕೆಲವು ವಿಷಯಗಳ ಕುರಿತು ಈ ನಿಬಂಧದಲ್ಲಿ ತಿಳಿಸಲು ಪ್ರಯತ್ನಿಸಿದ್ದೇನೆ. ರಾಗೌ ಅವರ ಕೃತಿಗಳ ಕುರಿತು ಅನೇಕರು ನಿಬಂಧಗಳನ್ನು ರಚಿಸಿದ್ದಾರೆ. ಪ್ರಸ್ತುತ ನಿಬಂಧದಲ್ಲಿ ಡಾ.ರಾಗೌ ಅವರ ಕಾವ್ಯಗಳಲ್ಲಿ ಆಧ್ಯಾತ್ಮ ಮತ್ತು ಆತ್ಮನಿವೇದನೆಗೆ ಸಂಬಂಧಿಸಿದ ಕೆಲವು ಕವಿತೆಗಳನ್ನು ಆಯ್ದುಕೊಂಡು ಅವುಗಳ ಬಗ್ಗೆ ಪ್ರಸ್ತಾಪಿಸಿದ್ದೇನೆ.

ಯಾವುದೇ ಪಂಥ, ವಾದ, ಸಿದ್ಧಂತಗಳಿಗೆ ಅಂಟಿಕೊಳ್ಳದೇ ತಮ್ಮದೇ ನೆಲೆಯಲ್ಲಿ ಹೇಗೆ ಚಿತ್ರಿಸಿದ್ದಾರೆ ಎಂಬುದರ ಬಗ್ಗೆ ತಿಳಿಸಲಾಗಿದೆ. ಮಾನವನ ಜೀವನದಲ್ಲಿನ ಜಂಜಾಟ, ಮಾನಸಿಕ ತಳಮಳ, ಮನಃಶಾಂತಿಗಾಗಿ ಅಧ್ಯಾತ್ಮದ ಆಸರೆ ಬಯಸುವ ಪರಿ, ಆತ್ಮ ನಿವೇದನೆಯ ಮೂಲಕ ಶಾಂತ ಚಿತ್ತವಾಗಿರಲು ಹೇಗೆ ಇರಬೇಕು ಎಂಬುದರ ಬಗ್ಗೆ ಹೇಳಿರುವುದನ್ನು ಇಲ್ಲಿ ತಿಳಿಸುತ್ತಿದ್ದೇನೆ. ಆತ್ಮ, ಪಾರಮಾರ್ಥಿಕತೆ ಮುಂತಾದ ವಿಷಯಗಳನ್ನು ಕುರಿತು ರಾಗೌ ಅವರು ಹೇಗೆ ಸ್ಪಷ್ಟಪಡಿಸಿದ್ದಾರೆ ಎಂಬುದರ ಬಗ್ಗೆ ತಿಳಿಸಲಾಗಿದೆ.

ಮಾನವ ಸಹಜವಾದ ಕೆಲವು ಗುಣಗಳು ಹೇಗೆ ಮನುಷ್ಯನನ್ನು ಅಧಃಪತನದತ್ತ ಕೊಂಡೊಯ್ಯುತ್ತವೆ. ಅವುಗಳಿಂದ ಅವನು ಹೇಗೆ ಹೊರಬರಬೇಕು. ಅವುಗಳಿಂದ ಹೊರಬಂದ ಮಾನವನು ಹೇಗೆ ಆತ್ಮ ಸಾಕ್ಷಾತ್ಕಾರವನ್ನು ಹೊಂದಬಲ್ಲ ಎಂಬದುರ ಬಗ್ಗೆ ಗಮನಹರಿಸಲಾಗಿದೆ. ಆಧ್ಯಾತ್ಮದ ಆಸರೆಯನ್ನು ಮಾನವ ಯಾವಾಗ ಬಯಸುತ್ತಾನೆ. ಅದರಿಂದ ಮಾನವನಿಗೆ ಆಗುವ ಪ್ರಯೋಜನ. ಆತ್ಮ ನಿವೇದನೆಯ ಮೂಲಕ ಕವಿ ಇಲ್ಲಿ ಏನನ್ನು ಬಯಸುವರು, ಸಮಾಜಕ್ಕೆ ಯಾವ ಸಂದೇಶವನ್ನು ನೀಡುವರು ಎಂಬುದರ ಬಗ್ಗೆಯೂ ತಿಳಿಸಲಾಗಿದೆ.

ಮಾನವನು ತನ್ನ ಜೀವನವನ್ನು ಹೇಗೆ ನಡೆಸಬೇಕು. ಜೀವನದ ಹಾದಿಯಲ್ಲಿ ಅವನಿಗೆ ಅವಶ್ಯಕವಾದುದ್ದು ಏನು ಎಂಬುದರ ಬಗ್ಗೆಯೂ ತಮ್ಮ ಕವನಗಳಲ್ಲಿ ಕವಿ ತಿಳಿಸುವುದು ಏನನ್ನು ಎಂಬುದನ್ನು ಇಲ್ಲಿ ತಿಳಿಸಲಾಗಿದೆ.

ಒಟ್ಟಾರೆ ಇಲ್ಲಿನ ಕವನಗಳಲ್ಲಿ ಆಧ್ಯಾತ್ಮ ಮತ್ತು ಆತ್ಮ ನಿವೇದನೆಯ ಮೂಲಕ ಮಾನವ-ಧರ್ಮ, ಆತ್ಮ-ಆಧ್ಯಾತ್ಮ, ಮಾನವ-ಸಮಾಜ ಇವುಗಳ ಪರಸ್ಪರ ಪೂರಕ ಸಂಬಂಧವನ್ನು ಹೊಂದಿರುವುದನ್ನು ಇಲ್ಲಿನ ಕವಿತೆಗಳಲ್ಲಿ ಹೇಗೆ ಅನಾವರಣಗೊಂಡಿದೆ ಎಂಬುದರ ಬಗ್ಗೆ ತಿಳಿಸಲಾಗಿದೆ.

# ಅಧ್ಯಾಯ–೧
# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಕಾವ್ಯ ಕಟ್ಟುವುದು ಒಂದು ಸೃಜನಾತ್ಮಕ ಕಲೆ ಅದು ಅನಾದಿ ಕಾಲದಿಂದಲೂ ಸತತ ನಡೆಯುತ್ತಾ ಬಂದಿದೆ. ಆಧುನಿಕ ಸಾಹಿತ್ಯ ಸಂದರ್ಭದಲ್ಲಿ ಸಂಪ್ರದಾಯಬದ್ಧ ಕಟ್ಟುಪಾಡುಗಳಿಂದ ಹೊರಬಂದು ಕವಿಗಳು ಕಾವ್ಯ ರಚನೆ ಮಾಡತೊಡಗಿದರು. 'ಕಾವ್ಯ' ಕವಿಗಳು ಪ್ರಬಲ ಮಾಧ್ಯಮವಾಯಿತು. ಪಾಶ್ಚಾತ್ಯ ಸಾಹಿತ್ಯದ ಪ್ರಭಾವ ಮತ್ತು ದೇಶೀಯ ಸಾಹಿತ್ಯದ ಸತ್ವವನ್ನು ತನ್ನದಾಗಿಸಿಕೊಂಡು ಕವಿಗಳು ಕಾವ್ಯ ಸೃಷ್ಟಿಯಲ್ಲಿ ತೊಡಗಿದರು. ಕಾವ್ಯದ ವಸ್ತುವಿನಲ್ಲಿ ವೈವಿಧ್ಯತೆ ಕಾಣಿಸಿಕೊಂಡು ಜೀವಂತಿಕೆಯನ್ನು ಪಡೆದುಕೊಂಡಿತು. ಓದುಗರನ್ನು ತನ್ನತ್ತ ಸೆಳೆದುಕೊಂಡ ಅವರ ಮೆಚ್ಚುಗೆಗೂ ಪಾತ್ರವಾಯಿತು.

ಹೀಗೆ ಹುಟ್ಟಿಕೊಂಡ ಸಾಹಿತ್ಯವನ್ನು ಧ್ಯೇಯ ಧೋರಣೆಗನುಗುಣವಾಗಿ ನವೋದಯ, ಪ್ರಗತಿಶೀಲ, ನವ್ಯ ಬಂಡಾಯ–ದಲಿತ ಎಂದು ವಿಭಾಗ ಮಾಡಿಕೊಂಡೆವು. 'ಶ್ರೀ' ಅವರಿಂದ ಮೊದಲುಗೊಂಡು ಇಂದಿನವರೆಗಿನ ಎಲ್ಲಾ ಕವಿಗಳು ಆಯಾ ಕಾಲಘಟ್ಟಕ್ಕೆ ಅನುಗುಣವಾಗಿ ಕಾವ್ಯ ಚಳುವಳಿಗೆ ಸ್ಪಂದನೆ ನೀಡುತ್ತಾ ವಿಪುಲವಾದ ಕಾವ್ಯ ಕೃಷಿಗೆ ಕಾರಣರಾಗಿದ್ದಾರೆ.

ನವೋದಯ ನವ್ಯ ಮತ್ತು ಸಮನ್ವಯ ಮಾರ್ಗಗಳನ್ನೇ ಮುಂದುವರಿಸಿ ತಮ್ಮ ವ್ಯಕ್ತಿತ್ವವನ್ನು ಕಾಪಾಡಿಕೊಂಡ ಕವಿಗಳು ಅನೇಕರಿದ್ದಾರೆ. ಇಂಥ ಯಾವ ವರ್ಗಕ್ಕೂ ಸೇರದೆ ಕಾವ್ಯತ್ವ ಮಾನವೀಯತೆ ಸಾಮಾಜಿಕತೆಯಂತ ಅಂಶಗಳ ಆಧಾರದ ಮೇಲೆ ಕಾವ್ಯರಚನೆಗೆ ತೊಡಗಿದವರು ಡಾ. ರಾಗೌ. ರಾಗೌ ಇಂಥದೇ ನಿರ್ದಿಷ್ಟ ಚಳುವಳಿಗೆ ಸೇರಿದವರೆಂದು ಹೇಳುವ ಅವಶ್ಯಕತೆ ಇರುವುದಿಲ್ಲ. ನವೋದಯ, ನವ್ಯದ ಚಿಂತನೆ ಬಗ್ಗೆ, ಬಂಡಾಯದ ಮಂಥನ, ಆಧುನಿಕೋತ್ತರ ಸ್ವಚ್ಛಂದ ಅಭಿವ್ಯಕ್ತಿ ಇವೆಲ್ಲವುಗಳ ಸಮ್ಮಿಲ ರಾಗೌ ಅವರ ಕಾವ್ಯ ರಾಗೌ ಅವರ ಕಾವ್ಯವನ್ನು ಮುಖ್ಯವಾಗಿ ಕಾವ್ಯ, ಕವಿತೆಗಳು, ಮುಕ್ತಕ, ಹನಿಗವನಗಳು (ಚುಟುಕುಗಳು) ಎಂದು ವಿಭಾಗ ಮಾಡಿಕೊಳ್ಳಬಹುದು.

ಡಾ. ರಾಗೌ ಅವರ ಸಾಹಿತ್ಯ ಕೃಷಿ ಪ್ರಾರಂಭವಾದುದು ಕಾವ್ಯದ ರಚನೆಯಿಂದ ರಾಗೌ ಕಾವ್ಯದಲ್ಲಿ 'ಅಂತರತಮ' ವನ್ನು ಶೋಧಿಸುವ ಮತ್ತು ಬದುಕಿನ ಗೂಢಗಳನ್ನು ವಿಸ್ಮಯಗಳನ್ನು ಹುಡುಕುವ 'ಮೌನ ಸಾಧಕ' ಎಂದು ಅರ್ಥಪೂರ್ಣವಾಗಿ ಗುರುತಿಸಲಾಗಿದೆ.

ಈ ನಿಬಂಧದಲ್ಲಿ 'ಡಾ ರಾಗೌ ಸಮಗ್ರ ಕಾವ್ಯ' ಎಂಬ ಕೃತಿಯನ್ನು ಆಧಾರವಾಗಿಟ್ಟುಕೊಂಡು ಅದರಲ್ಲಿರುವ ಒಟ್ಟಾರೆ ಕವಿತೆಗಳಲ್ಲಿ 'ಆಧ್ಯಾತ್ಮ ಮತ್ತು ಆತ್ಮ ನಿವೇದನೆಗೆ' ಸಂಬಂಧಿಸಿದ ಕವಿತೆಗಳನ್ನು ಆಯ್ದು, ಅವುಗಳನ್ನು ಅಧ್ಯಯನ ಮಾಡಿ, 'ಆಧ್ಯಾತ್ಮ & ಆತ್ಮ ನಿವೇದನೆ' ನೆಲೆಯಲ್ಲಿ ವಿಶ್ಲೇಷಣೆ ಮಾಡಿ ಆಧ್ಯಾತ್ಮ ಚಿಂತನೆ, ಸಾಮಾಜಿಕ ಕಾಳಜಿ ತತ್ವ, ನಿಲುವು, ಆಸಕ್ತಿ, ಒಲವುಗಳನ್ನು ಅನಾವರಣಗೊಳಿಸುವುದು ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

"ಡಾ ರಾಗೌ ಅವರ ಕಾವ್ಯಗಳಲ್ಲಿ ಆಧ್ಯಾತ್ಮ ಮತ್ತು ಆತ್ಮ ನಿವೇದನೆ ಎಂಬ ನಿಬಂಧವು ಮುಖ್ಯವಾಗಿ ರಾಗೌ ಅವರ ಬದುಕು ಬರಹ

ರಾಗೌ ಅವರ ಕಾವ್ಯಗಳಲ್ಲಿ ಆಧ್ಯಾತ್ಮ ಚಿಂತನೆ, ಆತ್ಮ ನಿವೇದನೆ ಎಂಬ ಅಂಶಗಳ ಕುರಿತ ವಿಷಯ ವ್ಯಾಪ್ತಿಯನ್ನು ಹೊಂದಿದೆ.

ಕನ್ನಡ ಸಾಹಿತ್ಯ ಲೋಕದಲ್ಲಿ ಮಹತ್ತರ ಪಾತ್ರವಹಿಸಿರುವ, ಅಗಾಧ ಸೇವೆ ಸಲ್ಲಿಸುತ್ತಿರುವ ಡಾ. ರಾಗೌ ಅವರ ಬದುಕನ್ನು ಕುರಿತಂತೆ ಅವರ ಹುಟ್ಟು, ಬೆಳವಣಿಗೆ, ವಿದ್ಯಾಭ್ಯಾಸ, ಕೃತಿಗಳು, ಸಂದ ಗೌರವ ಸನ್ಮಾನಗಳು, ಪಡೆದ ಪ್ರಶಸ್ತಿಗಳು, ಅವರಿಗಾದ ಸ್ಫೂರ್ತಿ, ಪ್ರೇರಣೆಗಳು ಮುಂತಾದ ಪ್ರಮುಖ ಅಂಶಗಳನ್ನು ಅನಾವರಣಗೊಳಿಸಲಾಗಿದೆ.

ಡಾ. ರಾಗೌ ಅವರ ಕಾವ್ಯಗಳಲ್ಲಿ 'ಆಧ್ಯಾತ್ಮ ಮತ್ತು ಆತ್ಮ ನಿವೇದನೆ' ಈ ಅಧ್ಯಯನದ ಕೇಂದ್ರ ಭಾಗವಾಗಿದ್ದು, ಆಧ್ಯಾತ್ಮಿಕ ನೆಲೆಯಲ್ಲಿ ಗುರುತಿಸಲಾದ ಆಧ್ಯಾತ್ಮಿಕ ಸಂಬಂಧಿಸಿದ ಕವಿತೆಗಳು ಆತ್ಮನಿವೇದನೆ ಸಂಬಂಧಿಸಿದ ಕವಿತೆಗಳು ಎಂಬ ಅಧ್ಯಾಯನಗಳನ್ನಾಗಿ ಮಾಡಿಕೊಂಡು ವಿಶ್ಲೇಷಿಸಲಾಗಿದೆ.

ನಾವೆಲ್ಲರೂ ಒಂದು ನಿರ್ದಿಷ್ಟ ವ್ಯವಸ್ಥೆಯ ಸಮಾಜದಲ್ಲಿ ಬದುಕುತ್ತಿದ್ದೇವೆ. ಸಮಾಜ ಒಂದೇ ತೆರನಾಗಿರುವುದಿಲ್ಲ. ನಿರಂತರ ಬದಲಾವಣೆಗೆ ಒಳಗಾಗುತ್ತಿರುತ್ತದೆ. ಸಮಾಜವು ಅನೇಕ ಸ್ತರಗಳ, ಜಾತಿಗಳ, ಧರ್ಮಗಳ, ಪಂಗಡಗಳ, ಸಮುದಾಯಗಳ, ಬುಡಕಟ್ಟು, ಜನರನ್ನು ಒಳಗೊಂಡ ಒಂದು ಬೃಹತ್ ಸಂಸ್ಥೆಯಾಗಿದೆ.

ಒಂದು ಸಮಾಜದಲ್ಲಿ ಬದುಕುತ್ತಿರುವ ಸಾಹಿತಿ ಸಮಕಾಲೀನ ಸಮಾಜದ ಸರ್ವಮುಖಗಳನ್ನು ಮುಕ್ತಮನಸ್ಸಿನಿಂದ ನೋಡುವಾಗ ಕವಿಯ ಕಣ್ಣೆದುರು ನಿಲ್ಲುವುದು ಸಂತಸದ ಕ್ಷಣಗಳಲ್ಲ, ಸಂಕಟದ ಹಾಗೂ ತಳಮಳದ ಕ್ಷಣಗಳು. ಬದುಕಿನ ವಿವಿಧ ಮುಖಗಳ ಚಿಂತನ ಕ್ರಮ ರೂಪುಗೊಂಡಿರುವ ಬಗೆಯ ಅಭಿವ್ಯಕ್ತಿಯ ಜೊತೆ ಜೊತೆಯಲ್ಲೇ ಆವೇಶಗೊಳ್ಳಬಹುದಾದ ಸಂದರ್ಭದಲ್ಲೂ ಸಮಾಧಾನ ನೆಲೆಗೆ ಒಂದು ಆಶಾವಾದದ ನೆಲೆಯನ್ನು ತಲುಪುವ ಸಂದರ್ಭಗಳೂ ಇವೆ.

ಆಧ್ಯಾತ್ಮಿಕ ಕವಿತೆಗಳಲ್ಲೆಲ್ಲ ಮುಖ್ಯವಾಗಿ ಆಧ್ಯಾತ್ಮ ಮತ್ತು ಮನುಷ್ಯನ ಸಂಬಂಧ, ಆಧ್ಯಾತ್ಮದ ನೆಲೆಯಲ್ಲಿ ಮನುಷ್ಯನ ಬದುಕು ಹೇಗೆ ವಿಸ್ತರಿಸಿದೆ ಎಂಬುದನ್ನು ಕಾಣುತ್ತೇವೆ. ಜೊತೆಗೆ ಮನುಷ್ಯನ ಸ್ವಾರ್ಥ, ಅಹಂಕಾರ, ಆತಂಕ, ದುಗುಡ, ತಳಮಳ ಎಲ್ಲಾವು ಹೇಗೆ ಮಾನವ ವಿರೋಧಿಯಾಗಿ ಮನುಷ್ಯನ ಜೀವನದಲ್ಲಿ ಆಶಾಂತಿಗೆ ಕಾರಣವಾಗುತ್ತವೆ ಎಂಬುದನ್ನು ತಿಳಿಯಬಹುದು.

ಮಾನವನ ಬದುಕಿನಲ್ಲಿ ಸಂಕಟ, ಆತಂಕ, ನಿರಾಶೆಗೆ ಒಳಗಾದಾಗ ತಾನು ಏನನ್ನು ಮಾಡಲು ಸಾಧ್ಯವಿಲ್ಲ ಎಂದಾಗ ಹೇಗೆ ಆ ಅನಂತಶಕ್ತಿಯ ಮೊರೆಹೋಗುವನು. ಮನಃಶಾಂತಿಗಾಗಿ ಹೇಗೆ ಆಧ್ಯಾತ್ಮದ ಆಸರೆಯನ್ನು ಬಯಸುತ್ತಾನೆ ಮತ್ತು ಆತ್ಮ ನಿವೇದನೆ ಮಾಡಿಕೊಳ್ಳುತ್ತಾ ತನ್ನ ಅಂತರಂಗ ಶೋಧನೆಯನ್ನು ಮಾಡಿಕೊಂಡು ಮನಃಶಾಂತಿ ಹೊಂದಲು ಹೇಗೆ ಪ್ರಯತ್ನಿಸುವನು ಎನ್ನುವ ಅಂಶಗಳು ಇಲ್ಲಿನ ಕವಿತೆಗಳಲ್ಲಿ ಅನಾವರಣಗೊಂಡಿದೆ.

ಒಟ್ಟಾರೆಯಾಗಿ ರಾಗೌ ಅವರ ಕವಿತೆಗಳು ನಮ್ಮ ಸುತ್ತಲಿನ ಎಲ್ಲಾ ವಿಚಾರಗಳನ್ನು ಬಿತ್ತರಿಸುವ ಪ್ರತಿನಿಧಿಗಳಂತಿದ್ದು ಅವುಗಳ ಅರಿವಿನಿಂದ ಮಾನಸಿಕ ಪ್ರಶಾಂತತೆಯನ್ನು, ದೃಢತೆಯನ್ನು ಕಂಡುಕೊಳ್ಳುವ ಬದಲಾವಣೆಯ ಪಥದಲ್ಲಿ ಸಾಗುವ ಕೆಲಸ ಮಾಡಬೇಕಾಗಿದೆ.

ಆಧ್ಯಾತ್ಮದ ಆಸರೆಯಿಂದ ಮನಃಶಾಂತಿ ದೊರಕುವುದು ಅಲ್ಲದೆ ಈ ಮೂಲಕ ಮಾನವ ಅನೇಕ ಸದ್ಗುಣಗಳನ್ನು ಅಳವಡಿಸಿಕೊಳ್ಳಲು ಸಾಧ್ಯ ಎಂಬ ಚಿಂತನೆಯ ಹಿನ್ನೆಲೆಯಲ್ಲಿ ರಾಗೌ ಕಾವ್ಯಗಳನ್ನು ರಚಿಸಿದ್ದಾರೆನ್ನಬಹುದು. ಎಲ್ಲಾ ಕಾವ್ಯಾಸಕ್ತರು ಓದಿ ತಿಳಿಯಬೇಕಾದ ವಿಷಯಗಳು ರಾಗೌರವರ ಕಾವ್ಯದಲ್ಲಿ ಕಾಣಬಹುದು. ಒಟ್ಟಾರೆ ಆಧ್ಯಾತ್ಮದ ನೆಲೆಯ ಚಿತ್ರಣವನ್ನು ತಮ್ಮ ಕಾವ್ಯಗಳ ಮೂಲಕ ತಿಳಿಯಪಡಿಸುತ್ತಾ ಅರಿವಿನ ದಾರಿದೀಪಗಳಾಗಿ ಅವರ ಕಾವ್ಯಗಳು ಪ್ರಮುಖ ಪಾತ್ರವಹಿಸುತ್ತವೆ. ಬೆಳೆಯುತ್ತಿವೆ.

ರಾಗೌ ಕವಿತೆಗಳ ವಸ್ತು ಅಧ್ಯಯನಕ್ಕೆ ಯೋಗ್ಯವಾದುದನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ. ಇವರ ಆಧ್ಯಾತ್ಮಿಕ ಚಿಂತನೆಗಳು ಆತ್ಮ ಮತ್ತು ಪರಮಾತ್ಮನ ನಡುವಿನ ಧೋರಣೆ, ಬದುಕನ್ನು ಯಾವ ಆಸರೆಯಿಂದ ನಡೆಸಿದಾಗ ಬದುಕು ಹೇಗೆ ಭಿನ್ನವಾಗಿ ತೋರುವುದು ಎಂಬುದು ಇವರ ಕವಿತೆಗಳ ಮುಖ್ಯ ಅಶಯವಾಗಿರುವುದನ್ನು ಕಾಣುತ್ತೇವೆ. ಈ ಎಲ್ಲಾ ಹಿನ್ನೆಲೆಯಲ್ಲಿ ರಾಗೌ ಕಾವ್ಯ ಆಧುನಿಕ ಕನ್ನಡ ಸಾಹಿತ್ಯದ ಮಹತ್ವದ ಕಾವ್ಯವಾಗಿದೆ ಎಂದು ಹೇಳಬಹುದು.

## ಅಧ್ಯಾಯ–೨

# ಡಾ. ರಾಗೌ ಅವರ ಬದುಕು ಮತ್ತು ಸಾಹಿತ್ಯ

ಡಾ. ರಾಗೌ ಕನ್ನಡ ಸಾಹಿತ್ಯ–ಸಂಸ್ಕೃತಿ ಚಿಂತನೆಯನ್ನು ನಡೆಸುವ ಸಂದರ್ಭದಲ್ಲಿ ಒಂದು ಪ್ರಮುಖವಾದ ಹೆಸರು. ಕನ್ನಡ ಸಾಹಿತ್ಯಕ್ಕೆ ಅವರ ಸೇವೆ ಅಪಾರವಾದುದ್ದು ಮತ್ತು ತುಂಬಾ ಮೌಲ್ಯಯುತವಾದುದ್ದು. ರಾಗೌ ಅವರು ಕಾವ್ಯ, ನಾಟಕ, ವಿಮರ್ಶೆ, ಸಂಶೋಧನೆ, ಗ್ರಂಥ ಸಂಪಾದನೆ, ಜಾನಪದ ಸಾಹಿತ್ಯ, ಶಿಶು ಸಾಹಿತ್ಯ, ಸಾಹಿತ್ಯ ಸಂಪಾದನೆ ಹೀಗೆ ಹಲವು ಪ್ರಕಾರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಅವರು ಕೈ ಹಚ್ಚಿದ ಎಲ್ಲ ಕ್ಷೇತ್ರಗಳಲ್ಲಿ ಶಿಸ್ತುಬದ್ಧವಾಗಿ ವಿವೇಕ ಪೂರ್ಣವಾಗಿ ತಮ್ಮನ್ನು ತೊಡಗಿಸಿಕೊಂಡು ಅಪ್ರತಿಮ ಸಾಧನೆ ಮಾಡಿದ್ದಾರೆ. ಬರಹ ಎಂಬುದು ಅವರಿಗೆ ಕರಗತ ವಿದ್ಯೆ.

ಅವರು ಹುಟ್ಟಿದ್ದು ಸಕ್ಕರೆಯ ನಾಡು ಎಂದೇ ಖ್ಯಾತವಾಗಿರುವ ಮಂಡ್ಯ ಜಿಲ್ಲೆಯ ಮದ್ದೂರು ತಾಲ್ಲೂಕಿನ ಈರೇಗೌಡನದೊಡ್ಡಿ ಎಂಬ ಗ್ರಾಮದಲ್ಲಿ. ಒಂದು ಸಾಮಾನ್ಯ ಹಳ್ಳಿಯ ಸಾಮಾನ್ಯ ರೈತ ಕುಟುಂಬದಲ್ಲಿ ರಾಗೌ ಅವರು ಜನ್ಮ ತಾಳಿದರು. ೧೯೪೨ರ ಏಪ್ರಿಲ್ ೨ ಅವರ ಜನ್ಮ ದಿನಾಂಕ ತಂದೆ–ಮಾಸ್ತಿಗೌಡ ತಾಯಿ ನಿಂಗಮ್ಮ, ತಂದೆ–ತಾಯಿಗಳೂ ಕುಟುಂಬದವರೂ ಇಟ್ಟ ಹೆಸರು ರಾಮೇಗೌಡ. ನಂತರ ರಾಗೌ ಎಂಬ ಕಾವ್ಯನಾಮದಿಂದ ಪ್ರಸಿದ್ಧರಾಗಿದ್ದಾರೆ. ಹುಟ್ಟಿದ ಸ್ವಲ್ಪ ಕಾಲದಲೇ ತಾಯಿಯನ್ನು ಕಳೆದುಕೊಂಡರು. ನಂತರ ತಂದೆಯನ್ನು ಕಳೆದುಕೊಂಡರು. ಅವಿಭಕ್ತ ಕುಟುಂಬದ ಪ್ರೀತಿಯೊಂದಿಗೆ ದೊಡ್ಡಪ್ಪ, ಚಿಕ್ಕಪ್ಪಂದಿರ ಅಕ್ಕರೆಯಲ್ಲಿ ಬೆಳೆದರು.

ರಾಗೌ ಅವರ ಪ್ರಾಥಮಿಕ ಮತ್ತು ಮಾಧ್ಯಮಿಕ ವಿದ್ಯಾಭ್ಯಾಸ ಹುಟ್ಟೂರಿಗೆ ಸಮೀಪದ ಬೆಸಗರಹಳ್ಳಿಯಲ್ಲಿ ನಡೆಯಿತು. ಪ್ರೌಢಶಾಲಾ ವ್ಯಾಸಂಗ ತಾಲ್ಲೋಕು ಕೇಂದ್ರವಾದ ಮದ್ದೂರಿನಲ್ಲಿ ನಡೆಯಿತು.

ಕನ್ನಡವನ್ನು ಶಿಸ್ತಿನಿಂದ ಕ್ರಮಬದ್ಧವಾಗಿ ಪಾಠಮಾಡುತ್ತಿದ್ದ ವಿದ್ಯಾರ್ಥಿಗಳನ್ನು ಅಕ್ಕರೆಯಿಂದ ನೋಡುತ್ತಿದ್ದ ಪಂಡಿತರೊಬ್ಬರ ಪ್ರಭಾವಕ್ಕೆ ರಾಗೌ ಒಳಗಾದರು. ಆದ್ದರಿಂದ ಪ್ರೌಢಶಾಲೆಯಲ್ಲಿದ್ದಾಗಲೇ ಕನ್ನಡದ ಬಗ್ಗೆ ಆಸಕ್ತಿಯನ್ನು ಬೆಳೆಸಿಕೊಂಡರು. ೧೯೬೫ರಲ್ಲಿ ಪ್ರೌಢಶಾಲಾ ವ್ಯಾಸಂಗವನ್ನು ಮುಗಿಸಿ ಎಸ್.ಎಸ್.ಎಲ್.ಸಿ.ಯಲ್ಲಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದರು.

ರಾಗೌ ಅವರು ಪದವಿಪೂರ್ವ ಶಿಕ್ಷಣ ಹಂತದಲ್ಲಿ ವಿಜ್ಞಾನದ ವಿದ್ಯಾರ್ಥಿಯಗಿದ್ದರು. ನಂತರದಲ್ಲಿ ಮೈಸೂರು ಮಹಾರಾಜ ಕಾಲೇಜಿನಲ್ಲಿ ಕನ್ನಡವನ್ನು

ಪ್ರಧಾನ ವಿಷಯವಾಗಿ, ಭಾಷಾ ವಿಜ್ಞಾನವನ್ನು ಅಧೀನ ವಿಷಯವನ್ನಾಗಿ ತೆಗೆದುಕೊಂಡು ಬಿ.ಎ. ಓದಲು ಪ್ರಾರಂಭಿಸಿದರು.

ಡಿ.ಎಲ್. ನರಸಿಂಹಾಚಾರ್, ಹಾ.ಮಾ.ನಾಯಕ, ಜಿ.ವರದರಾಜರಾವ್, ಸುಜನ, ಉ.ಕಾ.ಸುಬ್ಬರಾಯಾಚಾರ್, ಯು.ಆರ್.ಅನಂತಮೂರ್ತಿ ಮೊದಲಾದ ಗುರುವೃಂದ ರಾಗೌ ಅವರಿಗೆ ಲಭಿಸಿತು. ಇದರಿಂದ ಅವರಲ್ಲಿದ್ದ ಸಾಹಿತ್ಯ ಪ್ರಜ್ಞೆ ಮತ್ತಷ್ಟು ಜಾಗೃತವಾಯಿತು.

ಕವಿತೆಗಳ ರಚನೆ ಕಾಲೇಜು ದಿನಗಳಲ್ಲಿ ಮುಖ್ಯ ಹವ್ಯಾಸವಾಯಿತು. ವಿಮರ್ಶಾ ಲೇಖನಗಳನ್ನೂ ಬರೆಯುತ್ತಿದ್ದರು. 'ಗೀತಾಂಜಲಿ'ಯಿಂದ ಅನುವಾದಿಸಿದ 'ಬದುಕು ಮತ್ತು ಸಾವು' ಆತ್ಮೋದ್ದೀಪನದ ಅಪೇಕ್ಷೆಯಿಂದ ರಚನೆಯಿಂದ "ಮುಳುಗು ಮನವೆ" ಮೊದಲಾದ ಕವಿತೆಗಳು ಕಾಲೇಜು ಮ್ಯಾಗಜೀನಿನಲ್ಲಿ ಪ್ರಬುದ್ಧ ಕರ್ನಾಟಕದಲ್ಲಿ ಪ್ರಕಟವಾದವು.

ರಾಗೌ ತಮ್ಮ ವಿದ್ಯಾರ್ಥಿ ಜೀವನವನ್ನು ಸಾರ್ಥಕವಾಗಿ ಮುಗಿಸುತ್ತಿದ್ದಂತೆಯೆ ವಿಶ್ವವಿದ್ಯಾನಿಲಯ ೧೯೬೫ರಲ್ಲಿ ಅವರನ್ನು ಮಹಾರಾಜ ಕಾಲೇಜಿಗೆ ಕನ್ನಡ ಅಧ್ಯಾಪಕರನ್ನಾಗಿ ನೇಮಕ ಮಾಡಿತು. ಅಲ್ಲಿಯವರೆಗೆ ವಿದ್ಯಾರ್ಥಿ-ಲೇಖಕರಾಗಿದ್ದ ರಾಗೌ ನಂತರದಲ್ಲಿ ಅಧ್ಯಾಪಕ-ಲೇಖಕ ರಾಗೌ ಆದರು.

ಐದು ವರ್ಷಗಳ ಕಾಲ ಸ್ನಾತಕಪೂರ್ವ ಹಂತದಲ್ಲೂ ಮೂವತ್ತೆರಡು ವರ್ಷಗಳ ಕಾಲ ಸ್ನಾತಕೋತ್ತರ ಹಂತದಲ್ಲೂ ಕನ್ನಡ ಅಧ್ಯಾಪಕರಾಗಿ ಪ್ರವಾಚಕರಾಗಿ ಪ್ರಾಧ್ಯಾಪಕರಾಗಿ ತಮ್ಮ ಅಮೋಘ ಸೇವೆ ಸಲ್ಲಿಸಿದ್ದಾರೆ.

ಅವರು ಮೂವತ್ತೇಳು ವರ್ಷಗಳ ಸುದೀರ್ಘ ಸೇವೆಯ ನಂತರ ೨೦೦೨ ರಲ್ಲಿ ನಿವೃತ್ತರಾಗಿದ್ದಾರೆ. ನಿವೃತ್ತಿಯ ನಂತರವೂ ಅಧ್ಯಾಪನ ಕಾರ್ಯ ಅವರನ್ನು ಬಿಡಲಿಲ್ಲ. ಜೆ.ಎಸ್.ಎಸ್. ಸಂಸ್ಥೆಯವರು ಚಾಮರಾಜನಗರದಲ್ಲಿ ನಡೆಸುತ್ತಿರುವ ಮಹಿಳಾ ಕಾಲೇಜಿನ ಸ್ನಾತಕೋತ್ತರ ಕೇಂದ್ರದ ನಿರ್ದೇಶಕರಾಗಿ, ಪ್ರಾಧ್ಯಾಪಕರಾಗಿ ಕೆಲಸ ಮಾಡಿದರು. ಈಗ ಮಂಡ್ಯದಲ್ಲಿ ಕರ್ನಾಟಕ ಸಂಘವು ಕನ್ನಡ ವಿಶ್ವವಿದ್ಯಾಲಯದ ಸಂಯೋಜಕತ್ವದಲ್ಲಿ ನಡೆಸುತ್ತಿರುವ ಎಂ.ಫಿಲ್ ತರಗತಿಗಳ ಸಂಶೋಧನಾ ಕೇಂದ್ರದ ಶೈಕ್ಷಣಿಕ ಜವಾಬ್ದಾರಿಗಳನ್ನು ನಿರ್ವಹಿಸುತ್ತಿದ್ದಾರೆ. ಅಲ್ಲಿನ ಕನ್ನಡ ಅಧ್ಯಯನ ಮಂಡಳಿಯ ಅಧ್ಯಕ್ಷರಾಗಿದ್ದಾರೆ.

## ರಾಗೌ ಅವರಿಂದ ರಚಿಸಲ್ಪಟ್ಟ ಕೃತಿಗಳು

ಕಾವ್ಯ :

ಯಾತ್ರೆ – ೧೯೬೬

ತೆಪ್ಪ – ೧೯೬೨

ಮೋಡ ಮುಸುಕಿದ ಆಕಾಸ – ೧೯೯೬

ನೆಲದ ಮರೆಯ ನಿಧಾನ – ೧೯೯೯

ಮಾತು ಮೌನಗಳ ನಡುವೆ – ೨೦೦೧

ಆರದಿರಲಿ ಈ ಬೆಳಕು – ೨೦೦೨

ಮಾತು ಮಾರ್ಗ – ೨೦೦೨

ನಿನ್ನೆ ನಾಳೆಗಳ ನಡುವೆ – (ಸಮಗ್ರ ಕಾವ್ಯ ೨೦೦೨)

ಅನಿಲ ಆರಾಧನಾ – (ಸಂಯುಕ್ತ ಕಾವ್ಯ ಇತರರೊಡನೆ ೨೦೦೨)

ಅನಾಗತ – ೨೦೦೭

ನಾಟಕ

ದೊರೆ ದುರ್ಯೋಧನ (೧೯೯೭)

ಸಾಹಿತ್ಯ ವಿಮರ್ಶೆ

ರಾಘವಾಂಕ – ೧೯೯೭

ಕಾವ್ಯಾನುಶೀಲನ – ೧೯೬೮

ಅವಗಾಹನ – ೧೯೭೫

ಕುವೆಂಪು ಸಾಹಿತ್ಯ ವಿಮರ್ಶನ – ೧೯೭೮

ದುರ್ಗಸಿಂಹ – ೧೯೮೩

ಪ್ರಾಸ್ತಾವಿಕ – ೧೯೮೪

ಸಮಾಕೀರ್ಣ – ೧೯೯೧

ಕೆ.ಎಸ್.ನರಸಿಂಹಸ್ವಾಮಿ – ೨೦೦೨

ಬಿ.ಎಂ.ಶ್ರೀಕಂಠಯ್ಯ – ೨೦೦೭

ಪ್ರಾಚೀನ ಕಾವ್ಯ ಚಿಂತನ – ೨೦೦೭

**ಸಂಶೋಧನ ಮಹಾ ಪ್ರಬಂಧ**

ಕನ್ನಡ ಕಾವ್ಯಗಳಲ್ಲಿ ಐತಿಹಾಸಿಕ ವಿಚಾರಗಳು – ೧೯೯೨

**ಗ್ರಂಥ ಸಂಪಾದನೆ**

ಸಾಹಸ ಭೀಮ ವಿಜಯಂ – (ಇತರರೊಡನೆ ೧೯೮೫)

ಅಜಿತ ತೀರ್ಥಂಕರ ಪುರಾಣಂ – (ಇತರರೊಡನೆ ೧೯೮೮)

ಲಕ್ಷ್ಮೀಶನ ಜೈಮಿನಿ ಭಾರತ – (ಇತರರೊಡನೆ ೧೯೯೩)

ಸರ್ವಜ್ಞನ ವಚನಗಳು – ೨೦೦೩

**ಜಾನಪದ**

ನಮ್ಮ ಗಾದೆಗಳು – ೧೯೬೮

ಕಿಟ್ಟೆಲ್ ಕೋಶದ ಗಾದೆಗಳು – ೧೯೬೯

ಕರ್ನಾಟಕ ಜನಪದ ಕಥೆಗಳು – ೧೯೬೯

ನಮ್ಮ ಒಗಟುಗಳು – ೧೯೭೦

ಜನಪದ ನಂಬಿಕೆಗಳು – (ಇತರರೊಡೆನೆ ೧೯೭೨)

ಕನ್ನಡ ಶಿಶುಪ್ರಾಸಗಳು – ೧೯೭೨

ಜನಪದ ರಾಮಾಯಣ – (ಇತರರೊಡನೆ ೧೯೭೩)

ಜಾನಪದ ಸಂಕೀರ್ಣ – ೧೯೮೧

ಜನಪದ ಸಾಹಿತ್ಯ ರೂಪಕಗಳು – ೧೯೮೧

ಚಾಮಾಯಿ – ೧೯೮೧

ಜಾನಪದ ಸಂಶೋಧನ – ೧೯೮೧

ಜನಪದ ಆಟಗಳು – ೨೦೦೧

ಜನಪದ ಹಾಡು ಭಾರತ ಸಮಾಲೋಚನೆ – ೨೦೦೫

**ಸಂಶೋಧನೆ**

ಷಷ್ಠಿ ಸಂಪದ – ೨೦೦೫

**ಮಕ್ಕಳ ಸಾಹಿತ್ಯ**

ಕುಮಾರರಾಮ – ೧೯೭೮

ಕಂದನ ಕವನಗಳು – ೧೯೭೮

ಆರು ಪ್ರಾಣಿ ಕಥೆಗಳು – ೧೯೭೮

**ಸಂಪಾದನೆ**

| | | |
|---|---|---|
| ಬಿ.ಎಂ.ಶ್ರೀ. ನೂರರ ನೆನಪು (ಇತರರೊಡನೆ) | – | ೧೯೮೪ |
| ಕೈಲಾಸಂ ಬದುಕು ಬರಹ (ಇತರರೊಡನೆ) | – | ೧೯೮೫ |
| ಮಾಸ್ತಿಯವರು ಮತ್ತು ಚಿಕವೀರ ರಾಜೇಂದ್ರ (ಇತರರೊಡನೆ) | – | ೧೯೮೫ |
| ವಿನಯೋನ್ನತಿ (ಇತರರೊಡನೆ) | – | ೧೯೮೫ |
| ಕನ್ನಡ ಕವಿಗಳು ಕಂಡ ಮೈಸೂರು | – | ೧೯೯೦ |
| ಬೇಂದ್ರೆ ಸಾಹಿತ್ಯ ಸಮಾಲೋಚನೆ | – | ೧೯೯೩ |
| ಮಹಿಳಾ ಅಧ್ಯಯನದ ಆಯಾಮಗಳು | – | ೨೦೦೮ |
| ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ ಭಾಗ–೨ ೨೦೦೮ | – | ಸಂ–೫ |
| ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ ಭಾಗ–೩ ೨೦೦೮ | – | ಸಂ–೫ |

**ರಾಗೌ ಅವರಿಗೆ ಸಂದ ಪ್ರಶಸ್ತಿ ಮತ್ತು ಗೌರವ ಸನ್ಮಾನಗಳು**

* ರಾಗೌ ಅವರಿಗೆ ೧೯೭೦ ರಂದು "ನಮ್ಮ ಒಗಟುಗಳು" ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ.
* ೧೯೭೪– "ಜಾನಪದ ಸಂಕೀರ್ಣ" ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ.
* ೧೯೭೮– "ಕುವೆಂಪು ಸಾಹಿತ್ಯ ವಿಮರ್ಶನ" ಕೃತಿಗೆ ಕುವೆಂಪು ವಿದ್ಯಾವರ್ಧಕ ಟ್ರಸ್ಟ್ ಪ್ರಶಸ್ತಿ, ದೊರೆತಿದೆ.
* ೧೯೮೪ – ಮೈಸೂರು ವಿಶ್ವವಿದ್ಯಾನಿಲಯದ "ಪ್ರಬುದ್ಧ ಕರ್ಣಾಟಕ" ತ್ರೈಮಾಸಿಕ ಪತ್ರಿಕೆಯ ಸಂಪಾದಕ (೧೯೮೪–೮೭)
* ೧೯೮೫ – "ರನ್ನ ವಿರಚಿತ ಸಾಹಸ ಭೀಮ ವಿಜಯಂ" ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ.
* ೧೯೮೮ – "ರನ್ನ ವಿರಚಿತ ಅಜಿತ ತೀರ್ಥಕರ ಪುರಾಣಂ" ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ.
* ೧೯೯೦ – ರಂದು ಪಿಎಚ್‌ಡಿ ಪದವಿ ಪ್ರಾಪ್ತವಾಯಿತು.
* ೧೯೯೩ – "ಲಕ್ಷ್ಮೀಶನ ಜೈಮಿನಿ ಭಾರತ" ಕೃತಿಗೆ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದಿದ್ದಾರೆ.

* ೧೯೯೫ ರಂದು ೪ನೇ ಮಂಡ್ಯ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ, ಮದ್ದೂರು.
* ೧೯೯೫ ರಂದು ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ 'ಜಾನಪದ ತಜ್ಞ' ಪ್ರಶಸ್ತಿ ಲಭಿಸಿದೆ.
* ೧೯೯೭ರಲ್ಲಿ ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಸದಸ್ಯತ್ವ ಪಡೆದರು– ೧೯೯೭–೯೮
* ೨೦೦೦ರಲ್ಲಿ ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ ಲಭಿಸಿದೆ.
* ೨೦೦೮ – "ಅನಾಗತ" ಕವನ ಸಂಕಲನಕ್ಕೆ ಎಚ್.ಡಿ. ಚೌಡಯ್ಯ ಕಾವ್ಯ ಪ್ರಶಸ್ತಿ ಮಂಡ್ಯದ "ಜನದನಿ" ಸಂಘಟನೆಯಿಂದ ಪಡೆದದ್ದು.
* ೨೦೦೯ ರಲ್ಲಿ ಕಾರವಾರದಲ್ಲಿ ನಡೆದ "ಕರ್ನಾಟಕ ವಿಶ್ವವಿದ್ಯಾನಿಲಯ"ದ ೨೫ನೇಯ ಅಖಿಲ ಕರ್ನಾಟಕ ಜಾನಪದ ಸಮ್ಮೇಳನದ ಸರ್ವಾಧ್ಯಕ್ಷತೆ ವಹಿಸಿದ್ದರು.

## ಅಧ್ಯಾಯ–೩

# ಅಧ್ಯಾತ್ಮಕ್ಕೆ ಸಂಬಂಧಿಸಿದ ಕವಿತೆಗಳು

**ದಾರಿಯ ಬಳಿಯ ಹೂವು**

ದಾರಿಯ ಬಳಿಯಲರಳಿ ಸಾಯುತಿದೆ ಈ ಹೂವೊಂದು
ಇಲ್ಲ, ನೋಡಿ ತಣಿಯುವ ಹೃದಯವೊಂದು !
(ಹುಟ್ಟಿದ ಮೇಲೆ ಸಾರ್ಥಕ ಬೆಳಕಾಗಿ ಬಾಳಬೇಕು
ಇಲ್ಲದಿರೆ, ಇದ್ದರೂ ಸತ್ತಂತೆ ಬರಿ ಅಣುಕು !)
ಎಂದು ಚಿಂತಿಸಿರಬೇಕು ಈ ಸ್ನಿಗ್ಧ ಬದುಕು
ಚಿಂತೆಯ ಚಿಂತನದ ಹಿಂದಡಗಿದೆ ಇದರ ಹಿರಿಮೆ !

ದಾರಿಯ ಬಳಿಯಲ್ಲಿ (ಪಕ್ಕದಲ್ಲಿ) ಅರಳಿದ ಹೂವು ತನ್ನನ್ನು ನೋಡಿ ತಣಿಯುವ ಹೃದಯ (ಹೃದಯವಂತರು) ಇಲ್ಲವೆಂದು ಹಂಬಲಿಸುತ್ತದೆ. ಹುಟ್ಟಿದ ತಾನು ಸಾರ್ಥಕತೆಯನ್ನು ಪಡೆಯಬೇಕು. ನನ್ನ ಜೀವನ ಧನ್ಯವಾಗಲು ದೇವರ ಮುಡಿಯೋ, ನನ್ನನ್ನು ನೋಡಿ ಆನಂದಿಸುವ, ಆಸ್ವಾದಿಸುವರ ಬಳಿಯೋ ಸೇರಬೇಕು. ನನ್ನ ಸ್ನಿಗ್ಧ ಸೌಂದರ್ಯವೂ, ಸಾರ್ಥಕತೆಯನ್ನು ಪಡೆಯದೇ ದಗ್ಧವಾಗುತ್ತಿದೆ ಎಂದು ಚಿಂತೆಯಿಂದ ಹಪಹಪಿಸುವಂತೆ ನೋಡುಗನಿಗೆ ತೋರುತ್ತದೆ.

ಪಾಪ, ಇದಕೇನು ಗೊತ್ತು ಸೃಷ್ಟಿ, ರಹಸ್ಯದ ಮಹಿಮೆ !
ಹೊತ್ತಾರೆ ಅಲರಿನ ಮೇಲೆ ಮಂಜು ಮುಸುಕಿದ ಬೆಳ್ಳಿ
ಕಾಣಲಾರದ ಕಣ್ಣು ಕೊಕ್ಕರಿಸುವುದು ತಳ್ಳಿ !
ಬೆಳಗಾಯಿತೊ, ಸರಿ, ಬಿಡುವಿಲ್ಲದ ಮೋಟಾರಿನ ಮೊರೆತ
ಸಾಕಪ್ಪ ಹಾಳು ಶಬ್ದದ ಬೈರಿಗೆ ಕೊರೆತ
ಬಡಪಾಯಿ ಇದಕೊ ಕೆಂಧೂಳಿಯ ತೀರ್ಥಸ್ನಾನದ ಕಡೆತ !

ಪಾಪ ಆ ಹೂವಿಗೆ ಸೃಷ್ಟಿ ರಹಸ್ಯದ ಮಹಿಮೆ ತಿಳಿಯದು ಬೆಳಗಿನ ಜಾವ ಮುಸುಕಿದ ಮಂಜನ್ನು ಸೀಳಿಕೊಂಡು, ಕರ್ಕಶವಾದ ಶಬ್ಧದಿಂದ ರಸ್ತೆಯ ಇಕ್ಕೆಲಗಳಲ್ಲೂ ಧೂಳನ್ನು ಎರಚುತ್ತಾ ಸಂಚರಿಸುವ ವಾಹನಗಳಿಂದ ಬಂದಂತಹ ಧೂಲು ಮುಂಜಾನೆಯ ಮಂಜನ್ನು ಸ್ನಿಗ್ಧ ಸೌಂದರ್ಯದಿಂದ ಕೂಡಿದ ಹೂವನ್ನು ಒಮ್ಮೆಲೆ ಬದಿಗೆ ಸರಿಸಿ ಅವುಗಳಿಗೆ ಧೂಳಿನ ಲೇಪನಮಾಡಿ ಹೋಗುತ್ತವೆ. ಅದನ್ನು ನೋಡಿದಾಗ ಸೃಷ್ಟಿಯ ರಹಸ್ಯದ ಮಹಿಮೆ ಇದುವೇ ಜೀವನ ನಶ್ವರತೆಯೆಂದು ತಿಳಿಯುತ್ತದೆ.

ಇಲ್ಲಿ ರಾಗೌ ಅವರು ಹೂವಿನ ಮೂಲಕ ಬದುಕಿನ ಅನಿಶ್ಚಿತತೆಯನ್ನು; ಸೃಷ್ಟಿ ರಹಸ್ಯವನ್ನು ಓದುಗನಿಗೆ ಸೂಕ್ಷ್ಮವಾಗಿ ತಿಳಿಯಪಡಿಸುವ ಪರಿ ಅಮೋಘವಾಗಿದೆ.

ಹುಟ್ಟಿದ ಮೇಲೆ ಸಾರ್ಥಕ ಬೆಳಕಾಗಿ ಬಾಳಬೇಕು ಇಲ್ಲದಿದ್ದರೆ, ಇದ್ದರೂ ಸತ್ತಂತೆ ಬರಿ ಅಣುಕು.

ಇಲ್ಲಿ ಲೇಖಕರು ಹೂ ಮತ್ತು ಮನುಷ್ಯನ ಬದುಕಿನ ಸಾಮ್ಯತೆಯನ್ನು ಬಿಂಬಿಸಿದ್ದಾರೆ. ಹೂ ಕೇವಲ ಪ್ರತೀಕವಾಗಿದೆ. ಕಂಡರು ಬದುಕಿನ ಜಂಜಾಟದಲ್ಲಿ ಮಾನವನು ಸಾರ್ಥಕತೆಯನ್ನು ಬಯಸುವ ಪರಿಯನ್ನು ನೋಡಬಹುದು. ಸಾರ್ಥಕತೆ ಎಂಬ ಒಂದು ಬೆಳಕಿನ ಭಾವವನ್ನು ತನ್ನ ಜೀವಿತದ ಅವಧಿಯಲ್ಲಿ ಪಡೆದಾಗ ತನು ಸವೆಸಿದ ಬದುಕಿನ ಬಗ್ಗೆ ಮನುಷ್ಯನಿಗೆ ಹೆಮ್ಮೆಯೆನಿಸುತ್ತದೆ.

ಮಾನವನ ಬದುಕಿನಲ್ಲಿ ಎಲ್ಲವೂ ಸರಿಯಾಗುತ್ತಿದೆ, ಸರಿದಾರಿಗೆ ಬರುತ್ತಿದ್ದೇನೆ ಎಂದಾಗಲೇ ಕೆಲವೊಮ್ಮೆ ಜೀವನದ ಜಂಜಾಟಗಳು ಮೊದಲಾಗಿ ಮಾನಸಿಕ ಪ್ರಶಾಂತತೆಯನ್ನು ಹಾಳುಮಾಡುತ್ತವೆ. ಇಲ್ಲಿ ಲೇಖಕರು ಹೂವು ತನ್ನ ಸೌಂದರ್ಯವು ಸಾರ್ಥಕತೆಯನ್ನು ಪಡೆಯುತ್ತಿದೆ. ತಾನು ಗುರುತಿಸಿಕೊಳ್ಳುತ್ತೇನೆ ಎಂದು ಸಂತೋಷಿಸುವ ಸಂದರ್ಭದಲ್ಲಿ ಹಾಳು ಮೋಟಾರಿನ ಶಬ್ಧದ ಮೊರೆತ ಉಂಟಗಿ ನೋಡುಗನು ಶಬ್ಧಕ್ಕೆ ಬೇಸತ್ತು ಹೂವಿನ ಸೌಂದರ್ಯವನ್ನು ಲೆಕ್ಕಿಸದೆ ಸಾಗುತ್ತಾನೆ. ಹಾಗೆ ಜೀವನದಲ್ಲಿ ಸಾರ್ಥಕ ಘಟ್ಟವನ್ನು ತಲುಪುವ ಸಂದರ್ಭದಲ್ಲಿ ಜಂಜಾಟಗಳು ಮಾನವನ್ನು ವಿಚಲಿತನಾಗಿಸುತ್ತವೆ ಎಂಬರ್ಥವನ್ನು ಕಾಣಬಹುದು.

**ಎಲೆ ಮನವೆ**

ಬಿಡು ದುಃಖವ ಸುಡು ಚಿಂತೆಯ
ನಲಿದಾಡು ಮನವೆ ;
ಸಮನಾಗು ಸಿಹಿಕಹಿಗೆ
ಹಕ್ಕಿಯಂತೆ ಹಾರುವೆ !

ಕಷ್ಟವೆ ! ಬರಲಿ ಬಿಡು, ಮುಂದೆ
ಸುಖಿಯಾಗುವೆಯಂತೆ ;
ನೋವಿಲ್ಲದ ಬದುಕೆ ? ಛೆ ! ಉಮ್ಮಳಿಸದಿರು
ನೀನೆಲ್ಲ ಆಗುವೆಯಂತೆ !

ಹುಟ್ಟು–ಸಾವು ಪ್ರತಿ ಜೀವಿಯ ಬದುಕಿನ ಎರಡು ಮುಖಗಳು, ಅವು ಒಂದನ್ನು ಬಿಟ್ಟು ಒಂದು ಇರುವುದಿಲ್ಲ. ಹಾಗೆ ಕಷ್ಟ–ಸುಖಗಳು ಜೀವಿಯ ಬದುಕಿನ ಆದಿಯಿಂದ ಅಂತ್ಯದವರೆಗೆ ಜೊತೆ ಜೊತೆಗೆ ಬರುತ್ತವೆ.

ಮನವು ದುಃಖವನ್ನು ಮರೆತು ಚಿಂತೆಯನ್ನು ಬಿಟ್ಟು ನಲಿದಾಡುತ್ತ ಸಿಹಿ–ಕಹಿಯನ್ನು ಸಮಾನವಾಗಿ ಸ್ವೀಕರಿಸುವುದನ್ನು ಕಲಿಯಬೇಕು. ಆಗ ಹಕ್ಕಿಯಂತೆ ಸ್ವಚ್ಛಂದವಾಗಿ ಇರುವ ಭಾವವನ್ನು ಬೆಳೆಸಿಕೊಳ್ಳಬೇಕು. ಕಷ್ಟ ಸುಖವನ್ನು ಸಮಾನವಾಗಿ ಸ್ವೀಕರಿಸುತ್ತಾ ನೋವಿಲ್ಲದ ಬದುಕು ಯಾರಿಗೂ ಇಲ್ಲವೆಂಬ ಸತ್ಯದ ಅರಿವನ್ನು ಮನವು ಪಡೆಯಬೇಕು. ನಿರಾಳವಾಗಿ ಇರುವುದು.

ನೂರಾರು ಉಳಿಯೇಟಿಗೆ ಸಿಕ್ಕಿ
ನೊಂದು ಬೆಂದರೆ ತಾನೆ ;
ದೇವಶಿಲ್ಪದ ಭವ್ಯರೂಪವ
ತಾಳಿ ಬರುವುದು ನೀನೆ !

ಕಗ್ಗಲು ಕಲ್ಬಂಡೆ ಆಗಿರುವ ನೀ ದೇಹ
ವಿಗ್ರಹವೆ ನೀನಾಗಿ ನಲಿಯಲು ;
ಸಾಧನೆಯ ದಾರಿಯಲಿ ನಡೆನಡೆದು ದೂರ
ಸೇರಬೇಕು ನೀ ಗುರಿಯೊಳು.

ನೂರಾರು ಉಳಿಯ ಪೆಟ್ಟಿಗೆ ಸಿಕ್ಕಿದಾಗ ಬಂಡೆ ಹೇಗೆ ಶಿಲ್ಪವೊ, ದೈವಮೂರ್ತಿಯೋ ಹಾಗಿ ಸುಂದರ ರೂಪ ತಳೆಯುವುದೋ ಹಾಗೆ ನಮಗೆ ಕಷ್ಟಗಳು ಬಂದಾಗ ಕುಗ್ಗದೆ ಮನಸ್ಥೈರ್ಯದಿಂದ ಎದುರಿಸಿ ಬದುಕಿನ ಪಾಠ ಕಲಿಯಬೇಕು ಆಗ ಬದುಕು ಸುಂದರ. ಕಗ್ಗಲಿನಂತೆ ಇರುವ ಮಾನವನ ಮನಸ್ಸು ಸುಂದರ ವಿಗ್ರಹವಾಗಿ ರೂಪ ತಳೆಯಲು ಸಾಧ್ಯ ಎನ್ನುವ ಮಾತನ್ನು ಕವಿ ಇಲ್ಲಿ ಹೇಳಿದ್ದಾರೆ.

ಕಷ್ಟ ಸುಖದ ಬೆಂಕಿ ಜ್ವಾಲೆಯಲಿ
ಕರಗಿ ನೀರಾಗಿದಿರು ಮನವೆ;
ಎದೆಯ ತುಮುಲದ ಮುಂದೆ ಬಗ್ಗದಿರು
ಜಗ್ಗದಿರು ನನ್ನೊಲವೆ!

ಎನೊ ತಾಗಿದರೆ ಹೊತ್ತಿ ಉರಿಯದಿರಲಿ
ನಿನ್ನ ಭಾವದಗ್ನಿಯ ಪಂಜು ;
ಕೋಟಿ ಕಿರಣಗಳ ರವಿಯ ನೋಟಕೆ
ಹರಿಯಲಿ ಕತ್ತಲೆಯ ನಂಜು!

ಸಾಧನೆಯ ದಾರಿಯಲ್ಲಿ ಕ್ರಮಿಸಿ ಗುರಿಸೇರಬೇಕು. ಕಷ್ಟ-ಸುಖವೆಂಬ ಬೆಂಕಿಜ್ವಾಲೆಯಲ್ಲಿ ಕರಗಿ ನೀರಾಗಿದೆ ಮನಸ್ಸು ಬರವ ಕಷ್ಟಗಳನ್ನು ಎದುರಿಸಿ ನಿಂತು ಆತ್ಮಸ್ಥೈರ್ಯದಿಂದ ಇರಬೇಕು. ಬದುಕಿನಲ್ಲಿ ಏನು ತಾಗಿದರೂ (ನಡೆದರೂ) ಸಮಚಿತ್ತಭಾವದಿಂದ ಇದ್ದಾಗ ಸೂರ್ಯ ರಶ್ಮಿಯ ರೂಪದಲ್ಲಿ ಸಿಗುವ ಭಗವಂತನ ಅನುಗ್ರಹದಿಂದ ಕತ್ತಲೆ ಕಳೆದು ಬದುಕಿನಲ್ಲಿ ಬೆಳಕು ಸಿಗುತ್ತದೆ.

ಬರುವಂತೆ ಬಿಡು ನೂರಾರು ಕನಸುಗಳು
ನನಸಾಗಬಹುದು ಇಂದಲ್ಲ ನಾಳೆ ;
ಬೆಳಕಾದ ಕೈಯ ಕೈವಾಡವಿರಲಿರಲಿ
ಮಡಿಯಾಗುವಂತೆ ಈ ನಿನ್ನ ಬಾಳೆ !

ಅದಕಾಗಿ ನೀನಿಂದು ಚಿಂತೆಯನೆ ನೂಕು
ಬೆಳಕಿನಲಿ ಸೂರ್ಯನೆಮಗೆ ಬೇಕು ;
ಮರ್ತ್ಯದಲಿ ಅಮರ್ತ್ಯವನೆ ನೆಟ್ಟು ;
ನೆಲದೊಳಗೆ ಸಗ್ಗವನೆ ಕಟ್ಟು !

ಮಾನವ ಮನಸ್ಸಿನಲ್ಲಿ ಕನಸುಗಳು ಮೂಡಲು ಅವಕಾಶವನ್ನು ನೀಡಬೇಕು. ಆ ಕನಸುಗಳು ಇಂದಲ್ಲ ನಾಳೆ ನನಸಾಗಬಹುದು. ಆದ್ದರಿಂದ ನಿನ್ನ ಬಾಳು ಬದಲಾವಣೆಯನ್ನು ಹೊಂದಬಹುದು ಎನ್ನುವ ಮಾತನ್ನು ಇಲ್ಲಿ ಕವಿ ಹೇಳುವರು.

ಆದ್ದರಿಂದ ಮಾನವ ಮನಸ್ಸಿನಲ್ಲಿ ಕೇವಲ ಚಿಂತೆಯನ್ನು ಮಾಡುತ್ತಾ ಇರಬೇಡ. ಸೂರ್ಯನೆಂಬ ಬೆಳಕು ಬಾಳನ್ನು ಪ್ರವೇಶಿಸಲು ದಾರಿ ಮಾಡಿಕೊಡು. ಮರ್ತ್ಯದಲಿ ಅಮರ್ತ್ಯವನೆ ಇಟ್ಟು ಈ ಭೂಮಿ ನಿನ್ನ ಕನಸುಗಳಿಗೆ ಜೀವವನ್ನು ನಿಡು ಎನ್ನುವ ಮಾತನ್ನು ಕವಿ ಇಲ್ಲಿ ಹೇಳುವರು.

ಲೋಕದಳಲ ಕಡಲಗಲ ಅಲೆಗೆ
ಬೆಚ್ಚದೆ ನೀನಾಗು ಮೇರು ;
ಬವಣೆಯಾಚೆಯ ಬದುಕಿಗೆ ಸಾಗು
ನೀನಾಗುವೆ ಕಲ್ಪತರು !

ನೆಗೆ ಮನವೆ ನಿಗಿ ಮುಗಿಲಿಗೆ
ಅಲ್ಪತೆಯ ನೀಗುತ ;
ಸಮತೆಯನಂತತೆಯ ತುಂಬಿಕೊ
ಕಲ್ಪ ನೀನಾಗುತ !

ಈ ಲೋಕದಲ್ಲಿ ನಮಗೆ ಬರುವಂತ ಕಡಲಗಲದ ಅಲೆಗೆ ಮೇರು ಪರ್ವತದಂತೆ ಇದ್ದು ನೀನು ಸಾಗು ಆಗ ನೀನು ಕಲ್ಪತರು ಆಗುವೆ ನೋವು ಎನ್ನುವುದು ಇಲ್ಲದವರು ಯಾರು ಇಲ್ಲವೆಂದು ಚಿಂತೆಯನ್ನು ದೂರಮಾಡಿ ನವ ಜೀವನವನ್ನು ಎದುರು ನೋಡುತ್ತಾ ಬದುಕನ್ನು ಹೇಗೆ ಸವೆಸಬೇಕು ಎನ್ನುವಲ್ಲಿ ಕಷ್ಟವೇ ! ಬರಲಿಬಿಡು, ಮುಂದೆ ನೋವಿಲ್ಲದ ಬದುಕೆ! ಛೇ ಉಮ್ಮಳಿಸದಿರು ಸುಖಿಯಗುವೆಯಂತೆ; ನೀನೇಲ್ಲ ಆಗುವೆಯಂತೆ!

ಎನ್ನುವ ಲೇಖಕರ ಭಾವ ಇಲ್ಲಿ ವ್ಯಕ್ತವಾಗಿದೆ. ನೋವು ಇಲ್ಲದವರು, ಕಷ್ಟ ಎನ್ನುವರು ಯಾರು ಈ ಲೋಕದಲ್ಲಿಲ್ಲ. ನೋವು-ನಲುವುಗಳನ್ನು ಸಮಾನವಾಗಿ ಸ್ವೀಕರಿಸುವ ಮನಸ್ಥೈರ್ಯವನ್ನು ಅಳವಡಿಸಿಕೊಳ್ಳಬೇಕು. ಬದುಕಿನಲ್ಲಿ ಸ್ಥಿತಪ್ರಜ್ಞೆಯನ್ನು ಕಲಿಯಬೇಕು ಎನ್ನುವುದಾಗಿದೆ. ಈ ಸಾಲುಗಳನ್ನು ನೋಡಿದಾಗ

ನಡೆ ಮುಂದೆ, ನಡೆಮುಂದೆ
ಜಗ್ಗದೆಯೆ ಕುಗ್ಗದಯೇ,
ಹಿಗ್ಗಿ ನಡೆ ಮುಂದೆ

ಎನ್ನುವ ಕುವೆಂಪು ಅವರ ಪಾಂಚಜನ್ಯದಲ್ಲಿನ ಪದ್ಯದ ಸಾಲುಗಳು ನೆನಪಾಗುವುದು. ರಾಗೌ ಅವರ ಮೇಲೆ ಕುವೆಂಪು ಅವರ ಪ್ರಭಾವ ಆಗಿರುವುದನ್ನು ಅವರ ಕೆಲವು ಕವಿತೆಗಳಲ್ಲಿ ಗುರುತಿಸಬಹುದು.

ಸಮಾಜದಲ್ಲಿನ ತಪ್ಪುಗಳನ್ನೆ ಆದರ್ಶವಾಗಿ ತಗೆದುಕೊಂಡು ನಾವು ತಪ್ಪುಗಳನ್ನು ಮಾಡುತ್ತಾ ಸಾಗುವುದು ನಿಜವಾದ ಜೀವನ ಗಮ್ಯವಲ್ಲ. ಬದುಕಿನಲ್ಲಿ ಉನ್ನತ ಮೌಲ್ಯಗಳನ್ನು ರೂಢಿಸಿಕೊಳ್ಳುವ ಬಗೆಯನ್ನು ಅರಿಯಬೇಕು. ಆದ್ದರಿಂದ ನನ್ನನ್ನು ಉನ್ನತಿಯ ಕಡೆ ನಡೆಸು ಎನ್ನುತ ಸಾಗುವ ಆತ್ಮದ ನಿವೇದನೆಯನ್ನು ಇಲ್ಲಿ ಕಾಣಬಹುದು. ಇಲ್ಲಿ ಆತ್ಮದ ಆಶಯಗಳೇ ಮುಖ್ಯವಾಗಿವೆ. ನೋವು, ನಿರಾಶೆ, ಆತ್ಮನಿವೇದನೆ, ಆಧ್ಯಾತ್ಮ ರಾಗೌ ಅವರ ಕಾವ್ಯದ ಸ್ಥಾಯಿಭಾವಗಳಾಗಿ ಕೆಲಸ ಮಾಡಿರುವುದನ್ನು ಗಮನಿಸಬಹುದು. ಇವು ಸಮಾಜದ ಅಸಮಾನತೆ ತಂದುಕೊಟ್ಟಿರುವ ವ್ಯಕ್ತಿಗತ ಬದುಕಿನ ತುಳಿತದಿಂದ ಉಂಟಾದ ನೋವಿನಿಂದ ಉದ್ಭವಿಸಿರುವ ಆಶಯಗಳಾಗಿ ಪರಿವರ್ತಿತವಾಗುತ್ತವೆ.

ನೋವನ್ನು ಸಂಯಮದಿಮದ ಅಭಿವ್ಯಕ್ತಿಸಿ ಸಮ ಜೀವನದ ಕನಸನ್ನು, ಆಶಯವನ್ನು ಸಾಕಾರಗೊಳಿಸುವ ಬಯಕೆ ಇಲ್ಲಿಯ ಕವನಗಳಲ್ಲಿದೆ. ಸಾಮಾಜಿಕ ಕ್ರೌರ್ಯ ತಂದುಕೊಡುವ ನೋವು ಅನೇಕ ಸಂದರ್ಭಗಳಲ್ಲಿ ನಿರಾಶವಾದದ ಕಡೆ ತಂದು ನಿಲ್ಲಿಸುವ ಸಾಧ್ಯತೆಗಳೇ ಹೆಚ್ಚು. ಆದರೆ ಇಲ್ಲಿ ರಾಗೌ ಅವರು ನಿರಾಶವಾದದ ಅಂಚಿಗೆ ಬರುವುದಿಲ್ಲ.

ಈ ಸಂಕ್ರಮಣಶೀಲ ಜಗತ್ತಿನಲ್ಲಿ ಇತಿಹಾಸದುದ್ದಕ್ಕೂ ನಡೆದಿರುವ ದಮನಕಾರಿ ಪ್ರವರ್ತನೆಗೆ ಕೊನೆ ಬರುತ್ತದೆ ಎಂಬ ಉದಾತ್ತ ಆಶಯವನ್ನು ಇಲ್ಲಿ ಅಭಿವ್ಯಕ್ತಿಸಲಾಗಿದೆ.

**ಕರೆ**

ಭವದಲ್ಲದ್ದಿ ಬೇಯುತಿರುವ
ವಿಷಯ ಒಡಲ ಜೀವಕೆ
ಅಭಯ ಕೊಟ್ಟ ಪ್ರದೀಪಿಕೆ
ಕೈ ಬೀಸಿ ಕರೆಯುತಿದೆ
ಆನಂತ ದೂರಕೆ

ಬಿಡದ ಬೇಡಿ ತನುವಸುತ್ತಿ
ನಿದ್ದೆಗೈದಿದೆ
ಕಾಮ ಮೋಹ ವಿಷಯಾಗ್ನಿಯಲಿ
ತನುವು ಚಿತೆಯನೇರಿದೆ!
ಬದುಕಿ ಒರಲು ಉಸಿರೇ ಇಲ್ಲಿ
ಹಗಲಿರುಲು ಬೇಯುತಿದೆ!

ಇಲ್ಲಿ ಬದುಕಿಗೊಂದು ಸಿದ್ಧಾಂತ ಇಲ್ಲಿ ಬದುಕಿಗೊಂದು ಸಿದ್ಧಾಂತ ಇರಬೇಕು ಆ ಸಿದ್ಧಾಂತಕ್ಕೆ ಅನುಸಾರವಾಗಿ ನಡೆದುಕೊಳ್ಳಬೇಕೆಂದು ಬಯಸುವರು ಕವಿ. ಆದರೆ ಭವದಲ್ಲಿನ ಜಂಜಾಟಗಳಿಗೆ ಸಿಲುಕಿ ಜೀವವು (ಆತ್ಮವು) ನಲುಗುತ್ತಿದೆ. ಆದರೆ ಅನಂತತೆಯೆಂಬ ಪ್ರದೀಪಿಕೆಯು ಅಭಯ ಹಸ್ತವನ್ನು ನೀಡಲು ಸಿದ್ಧವಾಗಿದ್ದರು. ಮಾನವನು ತನ್ನ ಜಂಜಾಟಗಳಿಂದ ಹೊರಬಂದು ಅನಂತತೆಯತ್ತ ಸೇರವುದು ಸುಲಭ ಸಾಧ್ಯವಲ್ಲ ಎನ್ನುವ ಅಂಶವನ್ನು ಇಲ್ಲಿ ಕವಿಯು ವ್ಯಕ್ತಪಡಿಸುವರು. ಮಾನವನು ಸಾಮಾನ್ಯವಾಗಿ ಇಹಲೋಕದ ವ್ಯವಹಾರಗಳಿಗೆ ಹೆಚ್ಚು ಮಾನ್ಯತೆಯನ್ನು ಇತ್ತು ಆಧ್ಯಾತ್ಮದ ಕಿಂಚಿತ್ತು ಆಸರೆಯನ್ನು ತೃಪ್ತಿಯನ್ನು ಹೊಂದಲಾರ ಆದರೂ ಇಲ್ಲಿ ಯಾವುದೋ ಕಾಣದ ಭಾವನೆ ಬೇಡಿಯಂತೆ ಆವರಿಸಿರುವುದರಿಂದ ಆತ್ಮವು ಆನಂತತೆಯತ್ತ ಸಾಗಲು ಅಡ್ಡಿಯನ್ನುಂಟು ಮಾಡುತ್ತದೆ. ಮಾನವನು ಕಾಮ, ಕ್ರೋಧ, ಮೋಹ, ಲೋಭ, ಮದ,

ಮಾತ್ಸರ್ಯಗಳೆಂಬ ಅರಿಷಡ್ವರ್ಗಗಳ ಅಧೀನನಾದಾಗ ಅವನಲ್ಲಿ ವಿವೇಕವು ನಶಿಸುವುದು. ಚೇತನವನ್ನು ಅ ಚೇತನವನ್ನಾಗಿ ಮಾಡಿಬಿಡುವ ಶಕ್ತಿ ಈ ಅರಿಷಡ್ವರ್ಗಗಳಿಗಿದೆ. ಆದ್ದರಿಂದ ಇವುಗಳ ಪಾಶದಿಂದ ಬಿಡಿಸಿ ಕೊಳ್ಳಲು ಕಷ್ಟವಾಗುತ್ತಿದೆ. ಈ ಎಲ್ಲಾ ಭಾವಗಳನ್ನು ಮೀರಿ ಹೊರಬರಲು ಮಾನವನಿಗೆ ಕಷ್ಟ ಸಾಧ್ಯ. ಬದುಕಿರುವ ಮಾನವನನ್ನು ಜೀವಂತ ಶವದಂತೆ ಮಾರ್ಪಡಿಸುವುದು. ಈ ಅತಿರೇಖಭಾವಗಳಿಂದ ಆಗುತ್ತದೆ.

ಆದ್ದರಿಂದ ಮಾನವನು ಮೊದಲು ಆಸೆಗೆ ಅಧೀನನಾಗದೆ ಅದರಿಂದ ಹೊರಬರಬೇಕು. ನಂತರ ಅನಂತತೆಯತ್ತ, ಆತ್ಮ ಸಾಕ್ಷಾತ್ಕಾರ ದತ್ತ ಸಾಗಬೇಕು. ಆತ್ಮದ ಉನ್ನತಿಯನ್ನು ಸಾಧಿಸಲು ಆ ಸಂಕೋಲೆಯನ್ನು ಕಳಚಬೇಕೆಂಬ ಆಶಯವು ಇಲ್ಲಿ ವ್ಯಕ್ತವಾಗಿದೆ.

ತೊಳಲಿ ಬಳಲಿ ಬೆಂದ ಜೀವ
ಬಿದ್ದು ಬೇಡಿದೆ :
ಅಮೃತ ರಸವಾರ್ಧಿಗೆ
ಕರೆವ ದೂರ ಜ್ಞಾನಜ್ಯೋತಿಗೆ!
ಕತ್ತಲನೊತ್ತಿ ಬೆಳಕ ನೀಡಲು
ಶೂನ್ಯದೊಡಲು ಪೂರ್ಣಗೈಯ್ಯಲು
ಕರೆಯುತಿದೆ ನಿತ್ಯಾನಂದಕೆ
ಅಚಿಂತ್ಯ ಪೂರ್ಣಶಾಂತಿಗೆ !
ಕೈ ಬೀಸಿ ಕರೆಯುತಿದೆ
ನಿತ್ಯ ಭವ್ಯ ರುಂದ್ರ ಶೂನ್ಯಕೆ
ಅಚಿತ್ರ ಸತ್ಯ ಶೈಲ ಶಿಖರಕೆ
ಓ ! ಅನಂತದೂರಕೆ !

ಬದುಕಿನಲ್ಲಿ ಅನೇಕ ಏಳು-ಬೀಳುಗಳನ್ನು ಕಂಡ ಮನುಷ್ಯನು ಅಮೃತತ್ವದ ಆನಂದನನ್ನು ಬೇಡುತ್ತಾನೆ. ಮನದ ತಳಮಳವನ್ನು ದೂರಸರಿಸಿ ಜ್ಞಾನ ಜ್ಯೋತಿಯ ಕಡೆಗೆ ಪಯಣಿಸುವ ಆಶಯವನ್ನು ಹೊಂದಿರುತ್ತಾನೆ. ಆಗ ಕತ್ತಲೆಯಿಂದ ಬೆಳಕಿನೆಡೆಗೆ, ಶೂನ್ಯದಿಂದ ಅನಂತತೆಯೆಡೆಗೆ ಸಾಗುವ ಬಯಕೆಯಿಂದ ಆ ಆಧ್ಯಾತ್ಮನ ಮೊರೆಹೋಗುವನು. ಅಚಿಂತ್ಯದಿಂದ ಪೂರ್ಣ ಶಾಂತಿಯ ಕಡೆಗೆ ಜಾರಲು ಬಯಸಿದಾಗ ಆ ಆಧ್ಯಾತ್ಮದ ಆಸರೆಯಿಂದ ಅನಂತದೂರಕ್ಕೆ ತಲುಪುವನು.

ಒಟ್ಟಿನಲ್ಲಿ ಭವಬಂಧನದಿಂದ ಹೊರ ಬಂದಾಗ ಮಾತ್ರವೇ ಮಾನವನು ಅ ಆಧ್ಯಾತ್ಮನ ನೆಲೆಯಲ್ಲಿ ಮನಃಶಾಂತಿ ಪಡೆಯಬಲ್ಲ. ನಿರ್ಮೋಹಿಯಾಗಬಲ್ಲ. ಮಾಹೆಯನ್ನು ಗೆದ್ದರೆ ಮಾತ್ರವೇ ಬದುಕಿನಲ್ಲಿ ಅನಂತ ದೂರಕೆ ಸಾಗಬಲ್ಲ ಎನ್ನುವ ಅಭಿಪ್ರಾಯವನ್ನು ಕವಿ ತಿಳಿಸಿದ್ದಾರೆ.

೧೨ನೇ ಶತಮಾನದಲ್ಲಿ ಅಲ್ಲಮ ಪ್ರಭುವು

ಹೊನ್ನು ಮಾಯೆಯೆಂಬರು, ಹೊನ್ನು ಮಾಯೆಯಲ್ಲ,
ಹೆಣ್ಣು ಮಾಯೆಯೆಂಬರು, ಹೆಣ್ಣು ಮಾಯೆಯಲ್ಲ,
ಮಣ್ಣು ಮಾಯೆಯೆಂಬರು, ಮಣ್ಣು ಮಾಯೆಯಲ್ಲ
ಮನದ ಮುಂದಣ ಆಶೆಯೇ ಮಾಯೆ ಕಾಣಾ ಗುಹೇಶ್ವರ

ಎನ್ನುವ ಮಾತನ್ನು ತಮ್ಮ ವಚನದಲ್ಲಿ ಹೇಳಿದ್ದಾರೆ. ಇಲ್ಲಿ ಕವಿಯ ಕೆಲವು ಸಾಲುಗಳನ್ನು ನೋಡಿದಾಗ ಅಲ್ಲಮ ಪ್ರಭುವಿನ ವಚನಗಳ ಪ್ರಭಾವವು ಕಂಡುಬರುತ್ತದೆ. "ಆಸೆಯೇ ದುಃಖದ ಮೂಲ" ಎಂದು ಭಗವಾನ್ ಬುದ್ಧನು ಕೂಡ ಹಿಂದೆಯೇ ತಿಳಿಸಿದ್ದ.

ಆದರೆ ಆಸೆಯನ್ನು ಬಿಟ್ಟ ಜೀವಿಯೇ ಜಗತ್ತಿನಲ್ಲಿ ಇಲ್ಲ ಎಂಬುದು ನಿತ್ಯ ಸತ್ಯ, ಏಕೆಂದರೇ ಆಸೆಯೇ ಬದುಕಿನ ಮೂಲ, ಆಸೆಯೇ (ಮೋಹವೇ) ಸೃಷ್ಟಿಯ ಮೂಲ, ಆಸೆಯೇ ಜೀವನದ ತಳಹದಿ, ಆಸೆಯೇ ಪ್ರಕೃತಿಯ ಮೂಲ.

ಆಸೆಯನ್ನು ತೊರೆದವನು ಬುದ್ಧನಾಗವನು ಎನ್ನುವರು ಆದರೆ ಬುದ್ಧನಿಗೂ ತನ್ನ ಜನರಿಗೆ ಸದ್ಗತಿಯನ್ನು, ಒಳ್ಳೆಯ ಪ್ರಶಾಂತವಾದ ಬದುಕಿನ ಮಾರ್ಗವನ್ನು ತೋರಬೇಕೆಂಬ ಒಂದು ಆಸೆಯು ಇದ್ದೇ ಇತ್ತು.

ಆದ್ದರಿಂದ ಮೋಹವನ್ನು ಗೆದ್ದವನು ಈ ಪ್ರಪಂಚದಲ್ಲಿ ಇಲ್ಲವೆನ್ನಬಹುದು. ಆದ್ದರಿಂದ ಮಾನವನು ಬದುಕಿನಲ್ಲಿ ಅತಿಯಾದ ಮೋಹಕ್ಕೆ ಒಳಪಡದೆ ಬದುಕಿನ ಸಾರ್ಥಕತೆಯ ಕಡೆಗೆ ನಡೆಯಬೇಕು. ಬದುಕಿನ ಕಷ್ಟಗಳನ್ನು, ನೋವುಗಳನ್ನು ಎದುರಿಸಿ ಮುಂದೆ ಸಾಗಬೇಕು ಆದ್ದರಿಂದ ಬದುಕಿನ ಜಂಜಾಟಗಳಿಂದ ಬೆಂದ ಜೀವವು ಜ್ಞಾನ ಜ್ಯೋತಿಯ ಕಡೆಗೆ, ಅನಂತತೆಯ ರಸವರ್ಧಿಯನ್ನು ಸೇರಬೇಕು ಎಂಬ ಆದಮ್ಯವಾದ ಬಯಕೆಯನ್ನು ಇಲ್ಲಿ ಕವಿ ವ್ಯಕ್ತಪಡಿಸುವರು.

ನಿತ್ಯಾನಂದವನ್ನು ಹೊಂದಬೇಕು. ಅಲ್ಪ ಆನಂದವು ಜೀವನದ ಸಾಧನತೆಯಲ್ಲ ಆದ್ದರಿಂದ ಅಚಿಂತ್ಯ ಪೂರ್ಣ ಶಾಂತಿಯನ್ನು ಹೊಂದಬೇಕು. ಶೂನ್ಯದಿಂದ ಪರಿಪೂರ್ಣತೆಯೆಡೆಗೆ ಸಾಗಬೇಕು. ಆತ್ಮವು ಉನ್ನತಿಯನ್ನು ಸಾಧಿಸಬೇಕು.

ಮಾನವ ಜನ್ಮವು ಸಾರ್ಥಕತೆಯನ್ನು ಪಡೆಯಲು ನಮ್ಮಲ್ಲಿರುವ ಕತ್ತಲೆಯನ್ನು ಕಳೆದು ಬೆಳಕಿನತ್ತ ಸಾಗಬೇಕು.

ಅಸತೋಮ ಸದ್ಗಮಯ
ತಮಸೋಮ ಜ್ಯೋತಿರ್ಗಮಯ
ಮುತ್ಯೋರ್ಮ ಅಮೃತಂ ಗಮಯ ॥ ॥
ಎನ್ನುವಂತೆ ತಮಸ್ಸು ನಮ್ಮನ್ನು ಆವರಿಸದೆ

ಬೆಳಕಿನತ್ತ ಸಾಗಬೇಕು. ಮೃತ್ಯುವಿನಿಂದ ಅಮೃತತ್ವದ ಕಡೆಗೆ ಸಾಗಬೇಕು ಎನ್ನುವ ಭಾವವನ್ನು ಇಲ್ಲಿ ಕವಿಯು ವ್ಯಕ್ತಪಡಿಸುವರು.

ಶೂನ್ಯದಿಂದ ಪರಿಪೂರ್ಣತೆಯ ಕಡೆಗೆ ಸಾಗಬೇಕು. ಆಗ ಆತ್ಮವು ಪರಮಾತ್ಮನ ಆಸರೆಯನ್ನು ಪಡೆಯುವುದು ಅನಂತತೆಯನ್ನು ನಿತ್ಯಾನಂದವನ್ನು ಶಾಶ್ವತವಾಗಿ ಪಡೆಯುವುದು ಸಾಧ್ಯವಾಗುತ್ತದೆ. ಆತ್ಮವು ಉನ್ನತಿಯನ್ನು ಸಾಧಿಸಲು ಸಾಧ್ಯವಾಗುತ್ತದೆ ಎನ್ನುವುದು ರಾಗೌ ಅವರ ಆಶಯವಾಗಿದೆ.

ಇಲ್ಲಿ ಆತ್ಮದ, ಆಧ್ಯಾತ್ಮದ ಒಲವನ್ನು ಗಮನಿಸಬಹುದು. ಆತ್ಮವು ಆಧ್ಯಾತ್ಮನಲ್ಲಿ ಆಸರೆಯನ್ನು ಬೇಡುವುದನ್ನು ಕವಿ ಚಿತ್ರಿಸಿದ್ದಾರೆ. ಇಲ್ಲಿ ಜೀವನದ ಮೋಹವನ್ನು ಕಳಚಿ ಆತ್ಮವು ಪರಮಾತ್ಮನ ಸಹಾಯದಿಂದ ನಿತ್ಯಾನಂದವನ್ನು ಪರಿಪೂರ್ಣತೆಯನ್ನು, ಅಚಿಂತ್ಯ, ಪೂರ್ಣ ಶಾಂತಿಯನ್ನು ಪಡೆಯಬೆಕು ಎನ್ನುವ ಮನೋವೇದನೆಯನ್ನು ರಾಗೌ ಅವರು ಅದ್ಭುತವಾಗಿ ಚಿತ್ರಿಸಿದ್ದಾರೆ. ಇಲ್ಲಿ ಆತ್ಮದ ಆಶಯ ಮುಖ್ಯವಾಗಿದೆ ಎನ್ನಬಹುದು.

**ಬಿನ್ನಹ**

ನಾನು–ನೀನು, ಭೂಮಿ–ಬಾನು
ನಡುವೆ ಎಷ್ಟೊಂದು ಅಂತರ?!
ಸಾರ್ಥಕವೆ ಇರದ, ನೋವಿನುದರ
ಕಾಣವೇನು ಎಲ್ಲ ಬರಿಯೆ ಮಂಪರ !

ಇಲ್ಲಿ ಕವಿಯು ತನ್ನ ಮತ್ತು ಗುರು ಹಾಗೂ ಆಧಾತ್ಯ ಶಕ್ತಿಯ ನಡುವೆ ಇರುವ ಅಂತರವನ್ನು ಕುರಿತು ಹೇಳುವರು. ಬದುಕಿನಲ್ಲಿ ಸಾರ್ಥಕ ಭಾವವನ್ನು ಹೊಂದುವ ಬಗೆಯು ತಿಳಿಯದೆ ಮಂಪರಿನಲ್ಲಿ ಜೀವಿಸುತ್ತಿರುವೆ ಎಂದು ತಪಿಸುವರು.

ಈ ಸಂಸಾರ ಸಾಗರದಲ್ಲಿ ಈಜಿ ಪರಮ ಗುರುವಿನ ಸಾನಿಧ್ಯವನ್ನು ಹೊಂದಲು ಎದುರಾಗುವ ಅಡ್ಡಿಯನ್ನು ಕುರಿತು ಹೇಳುವರು. ಹಾಗೆಯೇ ಆಧ್ಯಾತ್ಮದ ನೆಲೆಯನ್ನು ಸೇರಲು ಪ್ರಯತ್ನಿಸುವಾಗ ಉಂಟಾಗುವ ಅಡ-ತಡೆಗಳನ್ನು ಕುರಿತು ಹೇಳುವರು.

ಮಾನವ ಮತ್ತು ದೈವದ ನಡುವಿನ ಅಂತರವು ಸಾಗರದ ವಿಶಾಲತೆಯಷ್ಟು ಭೂಮಿ-ಆಕಾಶದಷ್ಟು ಎಂದು ನಿರಾಶೆಯಿಂದ ಹೇಳುವರು. ಆದರೂ (ಕವಿ) ಮಾನವ ಆಧ್ಯಾತ್ಮದ ನೆಲೆಯನ್ನು ಸೇರುವ ತವಕ ಮಾತ್ರ ಆತನನ್ನು ಬಿಡದು ಅದು ನಿರಂತರವಾಗಿ ಕಾಡುವುದು ಎಂಬ ಅಂಶವನ್ನು ಇಲ್ಲಿ ಸ್ಪಷ್ಟಪಡಿಸುವರು.

ಈಸಬೇಕು ಎನ್ನುವ ಆಸೆ
ಬಲಿತು ಬಂತು ಜೀವಕೆ
ಹೊರಟು ನಿಂತ ಗಳಿಕೆಯಲ್ಲೆ
ತೊಟ್ಟ ತೊಡರ ಸಂಕಲೆ

ಮಾನವನು ಪ್ರಯತ್ನಪಟ್ಟು ಕೊನೆಗೊಮ್ಮೆ, ಹೇಗಾದರೂ ಆಧ್ಯಾತ್ಮದ ನೆಲೆಯನ್ನು ತಲುಪಬೇಕು ಎಂದು ಹೊರಾಟಗ ಭವ ಬದುಕಿನ ಜಂಜಾಟಗಳ, ತೊಡಕುಗಳ ಬಂಧನ, (ಸಂಕೋಲೆಯ) ಮಾನವನಿಗೆ ಅಡ್ಡಿಯಾಗುತ್ತದೆ ಎನ್ನುವ ನಿರಾಶೆಯನ್ನು ಕವಿ ಇಲ್ಲಿ ವ್ಯಕ್ತಪಡಿಸುವರು. ಈ ಸಾಲುಗಳನ್ನು ಗಮನಿಸಿದಾಗ ನಮಗೆ ದಾಸರು ರಚಿಸಿರುವ

"ಈಸಬೇಕು, ಇದ್ದು ಜಯಿಸಬೇಕು ॥ ಪ ॥
ಹೇಸಿಗೆ ಸಂಸಾರದಲ್ಲಿ ಆಶಾಲೇಶ ಇಲ್ಲದ್ಹಾಂಗ ॥ ಅ ಪ ॥

ತಾಮರಸ ಜಲದಂತೆ ಪ್ರೇಮವಿಟ್ಟು ಭವದೊಳು
ಸ್ವಾಮಿ ರಾಮ ಎನುತ ಪಾಡಿ ಕಾಮಿತಕಯ್ಗೊಂಬರೆಲ್ಲ
ಗೇರು ಹಣ್ಣಿನಲ್ಲಿ ಬೀಜ ಸೇರಿದಂತೆ ಸಂಸಾರದಿ
ಮೀರಿಯಾಸೆ ಮಾಡದಲೆ ಧೀರಕೃಷ್ಣನ ಭಕುತರೆಲ್ಲ
ಮಾಂಸದಾಸೆಗೆ ಮತ್ಸ್ಯ ಸಿಲುಕಿ ಹಿಂಸೆಪಟ್ಟ ಪರಿಯಂತೆ
ಮೋಸ ಹೋಗದ್ಹಾಂಗೆ ಜಗದೀಶ ಪುರಂದರ ವಿಠಲನನೆನೆದು ॥

ಎನ್ನುವ ಕೀರ್ತನ ಭಾಗವು ನೆನಪಾಗುವುದು.

ಮಾನವನು ಭವದಲ್ಲಿ ಸಂಸಾರ ಸಾಗರದಲ್ಲಿ ಅಂಟಿಯು ಅಂಟದಂತೆ ಇರಲು ಬಯಸುವಾಗ ಅವನ ಸುತ್ತ ಭವ ಬಂಧನಗಳು ಮುಳ್ಳು ಬೇಲಿಯ ರೂಪದಲ್ಲಿ ಅಭೇಧ್ಯವಾದ ಕೋಟೆಯ ರೂಪದಲ್ಲೂ ಸುತ್ತುವರಿದಿರುತ್ತವೆ. ಆದ್ದರಿಂದ ಮಾನವ ಭವ ಬಂಧದಿಂದ ಮುಕ್ತಿಯನ್ನು ಹೊಂದಬೇಕಾದರೆ ಹೇಗೆ ಲೌಕಿಕ ಪ್ರಪಂಚದ ಜೊತೆ ಸಂಬಂಧವನ್ನು ಹೊಂದಿರಬೇಕು ಎಂದು ಬಹಳ ಸೊಗಸಾಗಿ ದಾಸರು ತಮ್ಮ ದಾಸವಾಣಿಯಲ್ಲಿ ಕೀರ್ತನೆಗಳ ರೂಪದಲ್ಲಿ ಜನರಿಗೆ ತಿಳಿಸಿದ್ದಾರೆ. ಇಲ್ಲಿ ಕವಿಯ ಮೇಲೆ ಕೀರ್ತನೆಗಳ ಪ್ರಭಾವವು ಉಂಟಾಗಿರುವ ಅಂಶಗಳನ್ನು ಗಮನಿಸಬಹುದು.

ಆ ಆಬೇಧ್ಯವಾದ ವ್ಯೂಹವನ್ನು ದಾಟಿ ಮುಕ್ತ ಮಾನವನಿಗೆ ಮನೋಸ್ಥೈರ್ಯ, ದೃಢತೆ, ಚಿತ್ತಸ್ಥಿಮಿತತೆ, ಸ್ಥಿತಪ್ರಜ್ಞೆ ಬೇಕಾಗುವುದು ಅದನ್ನು ನೀನು ನೀಡು ಓ ಅನಂತ ಶಕ್ತಿಯೆ ಎಂದು ಕವಿಯು ಬಿನ್ನಾಹವನ್ನು ಮಾಡುವರು.

ಅಳಿದು ನನ್ನ ಅಹಂಕಾರ
ಬರಲು ಗುರುವೆ ನಿನ್ನ ಸಾರ;
ದೋಷವಿರಲು ಸಾವಿರಾರು
ಕ್ಷಮಿಸೊ ನೀನು ವಿಷದರ

ನಾನು, ನನ್ನದು, ನನ್ನಿಂದಲೇ ಎನ್ನುವ ಮಾನವ ಸಹಜವಾದ ಅಹಂಕಾರವು ನಾಶವಾಗಿ ಗುರುವಿನ ಆಸರೆಯನ್ನು ಬಯಸಿ ಬಂದಾಗ ಸದ್ಗುರುವೇ ಶರಣಾಗತನಾದ ನನ್ನನ್ನು ನಿನ್ನ ಬಳಿದ ಕರೆದು ಆಸರೆಯನ್ನು ನೀಡು ಆತ್ಮೋನ್ನತಿಯ ಮಾರ್ಗವನ್ನು ತಿಳಿಸು ಎಂದು ಗುರುವಿನಲ್ಲಿ ಕವಿಯು ಭಿನ್ನವಿಸುವವರು.

ಹಾಗೆಯೇ ಮಾನವನಲ್ಲಿರುವ ಸಹಜವಾದ ದೋಷವನ್ನು ಕ್ಷಮಿಸಿ ಅರಿವನ್ನು, ಮಾನವ ಜನ್ಮದ ಸಾರ್ಥಕತೆಯನ್ನು ಪಡೆಯಲು ನನಗೆ ನೆರವಾಗು ಎಂದು ಆ ಅನಂತ ಶಕ್ತಿಯನ್ನು ವಿಷಧರನೇ, ಭಗವಂತನೆ ನನಗೆ ಸಹಾಯವನ್ನು ಮಾಡು ಎನ್ನುವರು ಕವಿ.

ಆದರೆ ಮಾನವ ಜನ್ಮದ ಯಾತ್ರೆಯು ನಿರಾಂತಕವಾಗಿ ಸುಲಭ ಸಾಧ್ಯವಾದುದಲ್ಲ. ಅದು ಅನೇಕ ಎಡರು–ತೊಡರುಗಳನ್ನು ದಾಟಿಕೊಂಡು ಸಾಗುವಂತಹದು. "ಅತ್ತ ದರಿ ಇತ್ತ ಪುಲಿ" ಎಂಬ ನುಡಿಯಂತೆ ಯಾತ್ರೆಯುದ್ದಕ್ಕೂ ಅರಿವಿನ ದೀವಿಕೆಯನ್ನು ಮಾನವನು ಹೊಂದಿದ್ದರೆ ಮಾತ್ರವೇ ಮಾನವನು ಸರಿಯಾದ ದಾರಿಯಲ್ಲಿ ಯಾತ್ರೆಯನ್ನು ಕೈಗೊಂಡು ಗುರಿಯತ್ತ ಸಾಗುವನು ಎನ್ನುವ ಮಾತುಗಳನ್ನು ರಾಗೌ ಅವರು ಕೆಲವು ಸಾಲುಗಳಲ್ಲಿ ಹೇಳಿದ್ದಾರೆ.

ಮಾತು ಸಾಕೊ, ಮೌನ ಬೇಕೊ
ಚಿತ್ತವೇರಿ ಮುಗಿಲಿಗೆ;
ತಡಕುತಿದೆ ದಾರಿಯೊಂದ
ಗುರಿಯ ಮೈಲಿಕಲ್ಲಿಗೆ!

ಹಸುಳೆ ತಾಯ ಹುಡುಕುವಂತೆ
ಕಾತರಿಸುತಿದೆ ನನ್ನೆದೆ ;
ನಿನ್ನ ಸೇರಿ ಅಲ್ಲಿ ನಾನು
ಲೀನವಾಗಿ ಹೋಗದೆ?!

ಈ ಜೀವನ ಯಾತ್ರೆಯಲ್ಲಿ ಮಾನವನು ಕೆಲವೊಮ್ಮೆ ಸಂದಿಗ್ಧಕ್ಕೆ ಒಳಗಾಗುವನು ಮಾತು ಬದುಕಿಗೆ ಒಳಿತನ್ನು ಮಾಡುವುದೋ ಅಥವಾ ಮೌನ ಒಳಿತನ್ನು ಮಾಡುವುದೋ ಎಂಬ ತೊಡಕು ಉಂಟಾಗಿ ಗುರಿಯನ್ನು ತಲುಪಲು ಅಡ್ಡಿಯನ್ನು ಎದುರಾದ ಅಂತಹ ಸಂದರ್ಭದಲ್ಲಿ ಹಸುಳೆಯು ತಾಯಿಯನ್ನು ಹುಡುಕುವಂತೆ ನನ್ನ ಎದೆಯಲ್ಲಿ ಕಾತರವು ಉಂಟಾಗುತ್ತದೆ. ಆಗ ಗುರುವೇ ನಿನ್ನ ಆಸರೆಯು ಸಿಕ್ಕರೆ ನಾನು ನಿನ್ನಲ್ಲಿ ಲೀನವಾಗಿ ಗುರಿಯನ್ನು ನಿಭರ್ಯವಾಗಿ ಸೇರುವೆ ಎಂದು ರಾಗೌ ಅವರು ತಮ್ಮ ಬಿನ್ನಹವನ್ನು ಸಲ್ಲಿಸುವರು.

'ಬಿನ್ನಹಕೆ ಬಾಯಿಲ್ಲವಯ್ಯ
ಸಾಕ್ಷಿ ಸಾಕು ಅಂತರಂಗವೆ!
ಮತ್ತೆ ಮತ್ತೆ ಕೇಳುತಿರುವೆ
ಹೆಚ್ಚಿಗೇನು ಬೇಡ ಗುರುವೆ (ಬಿನ್ನಹ)

ಈ ಸಾಲುಗಳಲ್ಲಿ ಕವಿಯು ಬಿನ್ನಹವನ್ನು ಮಾಡಲು ಅತಿಶಯವಾದ ಕೋರಿಕೆಗಳೇನು ನನ್ನಲ್ಲಿ ಇಲ್ಲ ಅದಕ್ಕೆ ನನ್ನ ಅಂತರಂಗವೇ ಸಾಕ್ಷಿಯಾಗಿದೆ. ನನಗೆ ಬೇಕಿರುವುದು ಒಂದೇ, ಓ ಸದ್ಗುರುವೇ ಅದು ನಿನ್ನ ಅಭಯ ಮತ್ತು ಆಸೆರೆ ಎನ್ನುವ ಆಶಯವನ್ನು ಬಹಳ ಪ್ರಾಮಾಣಿಕವಾಗಿ ಕವಿಯು ಇಲ್ಲಿ ವ್ಯಕ್ತಪಡಿಸುವರು.

ಗೆ

ಮೂಡುತಿದೆ ಹೊಂಬೆಳಕು, ನಲಿವ ಬೆಳ್ಮುಗಿಲ ಕೆಂಪು
ತಳಿರ ತಣ್ಣೆಲರ ತಂಪಿನಲ್ಲಿ ;
ದೋಣಿ ಸಾಗಿತು ಬಾಳ ಬಾಂದೊರೆಗೆ
ಕಾಣು ಕಲ್ಪನೆಯ ಕಣ್ಣಿನಲ್ಲಿ !

ಮಾನವರೆಲ್ಲರ ಬಾಳಿನಲ್ಲಿಯೂ ಹೊಸಬೆಳಕು ಮೂಡುವುದು. ಅದು ಜೀವನಕೆ ಹೊಸ ಹುರುಪನ್ನು ತರುವುದು ಎನ್ನುವ ನಿರೀಕ್ಷೆಯನ್ನು ಹೊಂದಿರಬೇಕು. ಜೀವನವು ಪ್ರಕೃತಿಯಂತೆ ಬದಲಾವಣೆಯನ್ನು ಕಾಣುತ್ತಿರುತ್ತದೆ. ಜೀವನವು ನಿಂತ ನೀರಲ್ಲಿ. ಅದು ಸದಾ ಪ್ರವಹಿಸುವ ಗಂಗೆಯಂತೆ. ಸುಖ–ದುಃಖ, ನೋವು–ನಲಿವುಗಳ ಸಂಗಮ. ಪ್ರಕೃತಿಯಲ್ಲಿನ ಬಿಸಿಯು ತಂಪಾದ ಗಾಳಿಯಿಂದ ಕಡಿಮೆಯಾಗುವುದು ವಾತಾವರಣವು ಹಿತಕರವಾಗುವುದು. ಹಾಗೆ ಜೀವನದಲ್ಲಿ ಬದಲಾವಣೆಯ ಗಾಳಿಗಾಗಿ ಕಾಯಬೇಕು. ಬಾಳ ನಾವೆಯು ದಡ ಸೇರುತ್ತದೆ ಎಂಬ ಕಲ್ಪನೆಯಿಂದ ನಾವು ಜೀವನವನ್ನು ಸಾಗಿಸಬೇಖು. ಆಗ ಮಾನವರು ನೆಮ್ಮದಿಯಿಂದ ಬದುಕಲು ಸಾಧ್ಯ. ಬದುಕಿನಲ್ಲಿ ಎಲ್ಲವೂ ಆ ಆಧ್ಯಾತ್ಮ ಶಕ್ತಿಯ ಅಧೀನದಲ್ಲಿಯೇ ಇರುವುದು ಎಂಬುದನ್ನು ಮಾನವ ತಿಳಿಯಬೇಕು. ಚಿಂತೆ ಮಾಡುವೆ ಚಿನ್ಮಯನಿದ್ದಾನೆ" ಎನ್ನುವ ಮಾತಿನಂತೆ ನಮ್ಮ ಕೆಲಸವನ್ನು ನಾವು ಮಾಡುತ್ತ ಉಳಿದ ಫಲವನ್ನು ಭಗವಂತನಿಗೆ ಬಿಡಬೇಕು. ನಿರೀಕ್ಷೆಯಿಂದ, ಆಶಾವಾದರಿಂದ ಜೀವನವನ್ನು ನಡೆಸಬೇಕು ಎನ್ನುವ ಮಾತನ್ನು ಕವಿಯು ಇಲ್ಲಿ ಹೇಳುವರು.

ಆಸೆ ಇದೆ, ನಲ್ಮೆ ಇದೆ, ಇಂಪಿನಲಂಪಿದೆ
ಬಿರಿದೆದೆಯ ದೇವ ಮಂದಿರದಲ್ಲಿ;
ನಡೆದು ಬಾಳಿದ ಸುಗ್ಗಿ, ಬಾಳದಿರಲಿ ಬಗ್ಗಿ
ದುಮ್ಮಾನ ಕಾರ್ಪಣ್ಯ ಕಹಿಯಲ್ಲ !

ಮಾನವನ ಬದುಕಿನಲ್ಲಿ ತುಂಬ ಸುಲಭವಾಗಿ ಎಲ್ಲಾ ಕೋರಿಕೆಗಳು ನೆರವೇರುವುದಿಲ್ಲ. ಕೆಲವರಿಗೆ ಮಾತ್ರವೇ ಅತಿಯಾಗಿ ಕಷ್ಟಪಡದೇ ಎಲ್ಲಾ ಕೋರಿಕೆಗಳು ಈಡೇರುತ್ತವೆ. ಮತ್ತೆ ಕೆಲವು ಜನರಿಗೆ ಎಷ್ಟೇ ಕಷ್ಟಪಟ್ಟರು ಅವರು ಬಯಸಿದ ಬದುಕು ಸಿಗುವುದಿಲ್ಲ.

ಅಷ್ಟೇ ಅಲ್ಲದೆ ನ್ಯಾಯಯುತವಾಗಿ ಸಿಗಬೇಕಾದಂತಹ ಕೆಲವು ಅವಕಾಶಗಳು, ಕೀರ್ತಿ, ಅಧಿಕಾರ, ಹುದ್ದೆ ಮುಂತಾದ ಸಾಮಾಜಿಕ ಸ್ಥಿತಿ–ಗತಿಗಳು ಸಿಗುವುದಿಲ್ಲ. ಕೆಲವು ವ್ಯಕ್ತಿಗಳಿಂದ, ಕೆಲವು ಸಂದರ್ಭಗಳಿಂದ ಅವು ಅರ್ಹರ ಕೈ ತಪ್ಪಿ ಹೋಗುವ ಸಾಧ್ಯತೆಗಳನ್ನು ನಾವು ಸಮಾಜದಲ್ಲಿ ಎಷ್ಟೋ ವರ್ಷಗಳಿಂದ ನೋಡುತ್ತಾ ಬಂದಿದ್ದೇವೆ. ಅರ್ಹರಿಗೆ ಸಿಗಬೇಕಾದ ಅರ್ಹತೆ ತಪ್ಪಿ ಹೋಗುತ್ತಿರುವುದು ಕೇವಲ ಆಧುನಿಕ ಯುಗದಲ್ಲಿ ಮಾತ್ರವಲ್ಲದೇ ಅನಾದಿ ಕಾಲದಿಂದಲೂ ನಡೆಯುತ್ತ ಬಂದಿದೆ. ಕೆಲವೊಮ್ಮೆ ಇತಿಹಾಸದ ಪುಟಗಳನ್ನು ತಿರುವಿದಾಗ ಇಂತಹ ಘಟನೆಗಳು ಕಣ್ಮುಂದೆ ಬರುತ್ತವೆ. ಆದರೆ ಮಾನವನು ಎಂದೂ ನಿರಾಶಾವಾದಿಯಲ್ಲ ಅವನು ಆಶಾವಾದಿ. ಆಶಾವಾದವು ಮಾನವನಲ್ಲಿ ಇದ್ದಾಗ ಮಾತ್ರವೇ ಮಾನವನ ಜೀವನವು ಕೆಂಚವಾದರೂ

ಪ್ರಶಾಂತತೆಯಿಂದ ಸಾಗಲು ಸಾಧ್ಯ ಆದ್ದರಿಂದ ಬಾಳಪಯಣದಲ್ಲಿ ಎಂದಾದರೂ ಬಯಸಿದ ಬದುಕು ದೊರೆಯುವುದು ಎನ್ನುವ ಭಾವನೆಯಿಂದ ಬದುಕಬೇಕು ಎನ್ನುವ ಮಾತನ್ನು ಕವಿ ರಾಗೌ ಅವರು ತಮ್ಮ (–ಗೆ) ಎನ್ನುವ ಕವಿತೆಯಲ್ಲಿ ಹೇಳಿದ್ದಾರೆ. ಇದು ಸ್ವತಃ ರಾಗೌ ಅವರ ಬದುಕಿನ ಅನುಭವದಲ್ಲಿ ಮಾತಾಗಿ ತೋರುತ್ತವೆ. ಅವರು ಎಂದೂ ಯಾವುದನ್ನೂ ಬಯಸಿದವರಲ್ಲ ತಮ್ಮ ನಿಷ್ಕಾಮ ಸೇವೆಗೆ ತಾನಾಗಿ ಅರಸಿ ಬಂದಂತಹ ಸ್ಥಾನಗಳನ್ನು ಗೌರವವನ್ನು ಸ್ವೀಕರಿಸಿದ್ದಾರೆ ಅಷ್ಟೆ ಎನ್ನಬಹುದು.

ಮಾನವನ ಬದುಕಿನಲ್ಲಿ ಆಸೆ, ಆಕಾಂಕ್ಷೆಗಳು ಸಹಜವಾಗಿಯೇ ದೊಡ್ಡ ಮಟ್ಟದಲ್ಲಿ ಇರುತ್ತವೆ. ಕೆಲವೊಮ್ಮೆ ಮಾನವನು ತನ್ನಲ್ಲಿರುವುದರ ಬಗ್ಗೆ ನಿರಾಸಕ್ತಿ ಹೊಂದಿ ತನ್ನ ಬಳಿಯಲ್ಲಿಲ್ಲದ ವಸ್ತುವಿನ ಬಗ್ಗೆ ಹೆಚ್ಚು ಆಸೆ, ಆಸಕ್ತಿಯನ್ನು ತೆಳೆಯುವನು. ಆಗ ಕೆಲವೊಮ್ಮೆ ನಿರಾಸೆಗೂ ಗುರಿಯಾಗುವ ಸಂಭವವಿದೆ. ಮಾನವನ ಇಂತಹ ಮನಸ್ಥಿತಿಯನ್ನು ಕುರಿತು ಡಿವಿಜಿಯವರು

ಇರುವುದೆಲ್ಲವ ಬಿಟ್ಟು
ಇರದಿದುದರೆಡೆ ತುಡಿಯುವುದೇ
ಜೀವನ

ಎನ್ನುವ ಮಾತನ್ನು ಹೇಳಿದ್ದಾರೆ.

ಮಾನವನ ಬದುಕಿನಲ್ಲಿ ಆಸೆಯ ಜೊತೆಗೆ ಪ್ರೀತಿ–ವಾತ್ಸಲ್ಯ ಮುಂತಾದ ಮಧುರ ಅನುಭವಗಳು ಇರುತ್ತವೆ. ಆದರೆ ಅವು ಒಮ್ಮೆ ಅನುಭವಕ್ಕೆ ಬಂದರೆ ಅವನ ನೆನಪಿನಲ್ಲಿ ಮಧುರ ಕ್ಷಣಗಳಾಗಿ ಕೊನೆವರೆಗೂ ಉಳಿಯುತ್ತವೆ ಎಂತಹ ಕಷ್ಟ, ತೊಂದರೆ, ಯತನೆಗಳಲ್ಲಿ ಸಿಲುಕಿದರೂ ಕೂಡ ಮಾನವನಲ್ಲಿ ಕೊಂಚ ಚೈತನ್ಯ, ಭರವಸೆ, ನೀಡಿ ಜೀವನದಲ್ಲಿ ಮುಂದೆ ಸಾಗಲು ಮಾನವನ ಮನಸ್ಸೆಂಬ ಮಂದಿರದಲ್ಲಿನ ಈ ನೆನಪುಗಳೇ ಆಧಾರವಾಗುತ್ತದೆ.

ಬಾಳು ಕಲ್ಪನೆಯ ಬೀಡು, ಸವಿವ ಜೇನಿನಗೂಡು
ಸಿಹಿ–ಕಹಿಯ ಸಂಗಮದ ಕೂಡು;
ಮಿಡಿಯುತ್ತಿರುವ ವೀಣೆಯಲಿ ಹೊಮ್ಮುತಿರಲಿ
ಸಮತೆ ಸಂಯಮದ ಹಾಡು

ಮಾನವ ಬಾಳಿನಲ್ಲಿ ಹೊಸಬೆಳಕು ಬರುವವರೆಗೆ ಕಾಯಬೇಕು. ಆದರೆ ಮಾನವನು ಬದುಕಿನ ಕಷ್ಟ–ಕಾಪಣ್ಯಗಳಿಗೆ ಕುಗ್ಗಿ ಹೋಗಿ ಬದುಕಿನಲ್ಲಿ ಭರವಸೆಯನ್ನು ಕಳೆದುಕೊಂಡು ಕುಗ್ಗಿ ಹೋಗಬಾರದು ಬದಲಿಗೆ ಧೈರ್ಯದಿಂದ ಎದುರಿಸಿ ಮುಂದೆ ಸಾಗಬೇಕು. ಆಗ ಜೀವನವನ್ನು ನಡೆಸಲು ಸಾಧ್ಯ ಎನ್ನುವ ಅಭಿಪ್ರಾಯವನ್ನು ಕವಿ ಇಲ್ಲಿ ವ್ಯಕ್ತಪಡಿಸಿದ್ದಾರೆ.

ಮಾನವನ ಬದುಕಿನಲ್ಲಿ ಕೆಲು ಭಾವನೆಗಳು, ಸಮಸ್ಯೆಗಳು, ಮಾನವನ ಮನಸ್ಸಿನ ಭಾವನೆಗೆ ಸಂಬಂಧಿಸಿದ್ದು, ಇದ್ದುದ್ದರಲ್ಲಿ ತೃಪ್ತಿ ಪಡದೆ ಅವನು ಅತಿ ಆಸೆಗೆ ಒಳಗಾದರೆ ಎಂದೂ ಸುಖ-ಸಂತೋಷದಿಂದ ಇರಲಾರ ಎನ್ನಬಹುದು ಎನ್ನುವುದು ಇಲ್ಲಿ ವ್ಯಕ್ತವಾಗುವುದು ಮಾನವನ ಬಾಳಿನಲ್ಲಿ ಕಲ್ಪನೆಯಿಂದ ಕೆಲವೊಮ್ಮೆ ಸಂತೋಷ ಹೊಂದುವನು "ಬಂದೇ ಬರುವುದು ಒಂದು ದಿನ, ಗೆದ್ದೇ ಗೆಲುವುದು ಒಳ್ಳೆತನ" ಎನ್ನುವ ಒಂದು ಮಾತಿನಿಂದ ಸ್ಫೂರ್ತಿ ಪಡೆದು ತನ್ನ ಜೀವನದಲ್ಲಿಯೂ ಒಳ್ಳೆಯ ದಿನಗಳು ಬರುತ್ತವೆ. ಅವು ನನ್ನನ್ನು ಒಂದು ಉನ್ನತ ಸ್ಥಾನಕ್ಕೆ ಸೇರಿಸುವ ಕಾಲವನ್ನು ತರುತ್ತವೆ ಎನ್ನುವ ಆತ್ಮ ವಿಶ್ವಾಸದಿಂದ ತನ್ನ ಗುರಿಯೆಡೆಗೆ ಸಾಗುವ ಛಲದಿಂದ ಮಾನವ ನಡೆದರೆ ಅವನು ಜೀವನದಲ್ಲಿ ಎಷ್ಟೋ ಬಾರಿ ಗೆಲುವನ್ನು ಸಾಧಿಸುವನು. ತನ್ನ ಗುರಿಯ ಕಲ್ಪನೆಯಿಂದ ವಾಸ್ತವದಲ್ಲಿ ಶ್ರಮಪಟ್ಟು ತನ್ನ ಕನಸನ್ನು ನನಸುಮಾಡಿಕೊಳ್ಳುವಲ್ಲಿ ಮಾನವನ ಮನಸ್ಸಿನ ಭಾವನೆಯು ಪ್ರಮುಖ ಪಾತ್ರವನ್ನು ವಹಿಸುವುದು. ಕವಿಯ ಬಾಳಿನ ಬಗ್ಗೆ ತುಂಬ ಅದ್ಭುತವಾದ ಸಾಲುಗಳನ್ನು ಇಲ್ಲಿ ಬರೆದಿದ್ದಾರೆ ಎನ್ನಬಹುದು.

ಜೇನಿನ ಗೂಡನ್ನು ಕುರಿತು ಕವಿ ಇಲ್ಲಿ ಹೇಳಿದ್ದಾರೆ. ಸಹಜವಾಗಿಯೇ ಜೇನಿನ ಗೂಡನ್ನು ಭೇದಿಸಿ ಅದರಲ್ಲಿನ ಜೇನನ್ನು ಪಡೆಯಲು ಮಾನವನು ತುಂಬಾ ಶ್ರಮಪಡಬೇಕು. ಪಡೆದ ಜೇನಿನ ಸಿಹಿಯು ಮಧುರವಾಗಿರುವುದು. ಆದರೆ ಅದಕ್ಕಾಗಿ ಪಟ್ಟ ಪಾಡು, ಶ್ರಮ, ಕಷ್ಟದಾಯಕವಾದುದ್ದು ಕೆಲವೊಮ್ಮೆ ಜೇನು ಹುಳುಗಳ ದಾಳಿಯನ್ನು ಎದುರಿಸಿದಾಗ ನೋವು ಉಂಟಾಗಬಹುದು. ಆ ಎಲ್ಲಾ ಅನುಭವಗಳೂ ಸಿಹಿ-ಕಹಿಗಳ ಮಿಶ್ರಣದಂತೆ ಕಾಣುವುವುದು ಸಹಜವೇ ಹಾಗೆಯೇ ಬಾಳಿನಲ್ಲಿ ಮಾನವನು ಒಳ್ಳೆಯ, ಕೆಟ್ಟ ಅನುಭಗಳ ಜೊತೆ ಜೊತೆಗೆ ಸಾಗಬೇಕು ಎನ್ನುವ ಅಭಿಪ್ರಾಯವು ಇಲ್ಲಿ ವ್ಯಕ್ತಿವಾಗಿದೆ.

ಬಾಳಿನ ವೀಣೆಯು ಯಾವಾಗಲೂ ಶೃತಿಯಲ್ಲಿಯೇ ಇರುವುದಿಲ್ಲ. ಕೆಲವೊಮ್ಮೆ ಅಪಶೃತಿಯತ್ತ ಸಾಗುವ ಸಾಧ್ಯತೆಗಳೂ ದಟ್ಟವಾಗಿಯೇ ಇರುತ್ತವೆ. ಆದ್ದರಿಂದ ಎಚ್ಚರಿಕೆಯಿಂದ, ಮಾನವ ಸಹಜವಾದ ದೌರ್ಬಲ್ಯಗಳನ್ನು ಅಧೀನದಲ್ಲಿ ಇಟ್ಟುಕೊಂಡು ಜೀವನವನ್ನು ನಡೆಸಬೇಕು ಎನ್ನುವ ಮಾತನ್ನು ರಾಗೌ ಅವರು ಸೊಗಸಾಗಿ ಬಹಳ ಸಂಯಮದಿಂದ ಅಭಿವ್ಯಕ್ತಿಗೊಳಿಸಿದ್ದಾರೆ ಎನ್ನಬಹುದಾಗಿ.

**ಸೋಜಿಗ**

ಆದಿ ಎಲ್ಲಿಹುದೋ? ಅಂತ್ಯವೆಲ್ಲಿಹುದೋ?
ತಿಳಿಯದಷ್ಟು ಅಗೋಚರ!
ಭವದೀ ಬಂದುರ ಚಕ್ರ ಸುತ್ತುತಿರಲು ನಿತ್ಯ
ಸುರುಳಿಗೇಕಿಟು ಆತುರ!

ಮಾನವನ ಬದುಕಿನಲ್ಲಿ ಆದಿಯುವುದು ಎಂದು ನಿಖರವಗಿ ಹೇಳಲಾಗದು. ಅದು ಯಾವುದರ ಆದಿ, ಎಲ್ಲಿಂದ ಶುರುವಾಯಿತು ಎನ್ನುವ ಕುರಿತು ಆಲೋಚಿಸಬೇಕಾಗುತ್ತದೆ. ಈ ಪ್ರಪಂಚಕ್ಕೆ ಬಂದಾಗಿನಿಂದೋ, ತಾಯಿಯ ಗರ್ಭದಲ್ಲಿದ್ದಾಗಿನಿಂದೋ, ಊಹೆ ತಿಳಿದಾಗಿನಿಂದಲೋ, ಆಲೋಚನೆ ಶುರುವಾದಾಗಿನಿಂದಲೋ ಹೀಗೆ ಅನೇಕ ವಿಚಾರಗಳು ನಮ್ಮ ಸ್ಮೃತಿ ಪಟಲದಲ್ಲಿ ಹರಿದು ಹೋಗುವುವು. ಇದರಿಂದಾಗಿ ಮಾನವ ಜೀವನದ ಆದಿ ಯಾವುದೆಂದು ನಿಖರವಾಗಿ ಹೇಳಲಾಗುವುದಿಲ್ಲ. ಹಾಗೆಯೆ ಅಂತ್ಯವು ಎಲ್ಲಿಹುದೋ? ಎಂದು ಆಗುವುದೋ ಎನ್ನುವುದನ್ನು ಯಾರು ಹೇಳಲು ಆಗುವುದಿಲ್ಲ. ಅದು ನಿಗೂಢವಾಗಿರುವುದು. ಮಾನವನ ಉಸಿರಾಟನಿಂತಾಗ ಅಂತ್ಯವೂ? ಮಾನವನಲ್ಲಿ ನೈತಿಕತೆ, ಮಾನವತ್ವ ನಶಿಸಿದಾಗ ಅವನ ಜೀವಿತದ ಅಂತ್ಯಕಾಲವೋ, ಜಗದ ಮೋಹವನ್ನು ಬಿಟ್ಟಾಗ ಮಾನವನ ಅಂತ್ಯವೋಈ ಯಾವುದು ಎಂದು ನಿಖರವಾಗಿ ಹೇಳಲಾಗದು. ಎಲ್ಲಿಯೋ ಹುಟ್ಟಿ ಎಲ್ಲಿಯೋ ಬೆಳೇದು ಎಲ್ಲಿಯೋ ಮಾನವ ಜೀವಿತವು ಅಂತ್ಯವಾಗುವುದು. ಆಗಾಗಿ ಹುಟ್ಟಿದ ಮನುಷ್ಯ ಒಂದೇ ಊರಲಿ ಬಾಳಲು ಆಗಲ್ಲ. ಆಗೆಯೇ ತನ್ನ ಬದುಕಿನ ಆದಿ ಅಂತ್ಯವನ್ನು ಮಾನವ ತಿಳಿಯುವುದು ಅಷ್ಟು ಸುಲಭ ಸಾಧ್ಯವಲ್ಲ. ಅದು ತಿಳಿಯದಷ್ಟು ಅಗೋಚರವಾಗಿ, ನಿಗೂಢವಾಗಿ ದೊಡ್ಡ ರಹಸ್ಯವಾಗಿ ಉಳಿಯುತ್ತದೆ ಎನ್ನುವ ಮಾತನ್ನು ಕವಿಯು ಇಲ್ಲಿ ಹೇಳಿದ್ದಾರೆ.

ಈ ಭವ ಬಂಧನದಲ್ಲಿ ಮಾನವನು ತಮಗೆ ಅರಿವಿಲ್ಲದಂತೆ ಸಿಕ್ಕಿಕೊಳ್ಳುವನು. ಭವದಲ್ಲಿನ ಬಂಧನಗಳು ಮಾನವನು ತಾನು ಬಂಧನಕ್ಕೆ ಒಳಗಗುತ್ತಿದ್ದೇನೆ ಎಂದು ತಿಳಿಯುವ ಮೊದಲೇ ಅವನನ್ನು ವೇಗವಾಗಿ ಸುತ್ತುವರಿಯುತ್ತವೆ ಎನ್ನುವ ಅಭಿಪ್ರಾಯವನ್ನು ಈ ಪದ್ಯದ ಕೆಲವು ಸಾಲುಗಳಲ್ಲಿ ಕಾಣಬಹುದು.

ಇದ ತಿಳಿಯೆ ಹೊರಟ ವಿಜ್ಞಾನ ಮೊದಲಾದ ಶಾಸ್ತ್ರ
ಬರಿಯೊಂದು ಲಾಂದ್ರ ಮಾತ್ರ!
ಭೂತದರಿವಿಲ್ಲ, ಭವಿಷ್ಯ ಕಾಣಲಳವಲ್ಲ
ವರ್ತಮಾನದ ತಿಳಿವೋ ಅಲ್ಪ ಮಾತ್ರ!

ಮಾನದ ಬದುಕಿನ ವಾಸ್ತವಿಕತೆಯನ್ನು ಬದುಕಿನ ಅನೇಕ ಸಂಗತಿಗಳನ್ನು ಕುರಿತು ವೈಜ್ಞಾನಿಕ ಸಂಶೋಧನೆಗಳು ನಡೆಯುತ್ತಿವೆ. ಆದರೆ ಅವುಗಳಿಂದ ಕಂಡುಕೊಂಡ ಸತ್ಯಗಳು ಕೆಲವು ಮಾತ್ರ. ಇನ್ನೂ ಅನೇಕ ರಸಹ್ಯಗಳನ್ನು ಬೇದಿಸಲು ವಿಜ್ಞಾನ ಜಗತ್ತಿಗೆ ಇಂದಿಗೂ ಸಾಧ್ಯವಾಗಿಲ್ಲ. ವಿಜ್ಞಾನವು ಎಷ್ಟೇ ಮುಂದುವರಿದರೂ ಕೆಲವು ಸಂಗತಿಗಳು, ಸಮಸ್ಯೆಗಳು ಇಂದಿಗೂ ಸಮಸ್ಯೆಗಳಾಗಿಯೇ ಉಳಿದಿವೆ. ಕೆಲವು ರಹಸ್ಯಗಳು ಇದುವರೆವಿಗೂ ರಹಸ್ಯಗಳಾಗಿಯೇ ಉಳಿದಿವೆ. ಲಾಂದ್ರದ ಬೆಳಕು ಹೇಗೆ ಸ್ವಲ್ಪ ಜಾಗದಲ್ಲಿ ಮಾತ್ರವೇ ಪಸರಿಸುತ್ತದೋ ಹಾಗೆಯೇ ವಿಜ್ಞಾನದಿಂದ ಜಗತ್ತಿಗೆ ತಿಳಿದ ಸತ್ಯಗಳು ಸ್ವಲ್ಪವೇ ಹಾಗಿವೆ. ಕೆಲವು ಭೂತಕಾಲದ ವಿಷಯಗಳು ಇನ್ನೂ ಬೇದಿಸಲು ಹಾಗಿಲ್ಲ. ಕೆಲವು ಭವಿಷ್ಯದ ಸಂಗತಿಗಳನ್ನು ನಿಖರವಾಗಿ ತಿಳಿಸಲು ವಿಜ್ಞಾನಕ್ಕೆ ಹಾಗಿಲ್ಲ. ಅಷ್ಟೇ ಅಲ್ಲದೆ ವರ್ತಮಾನದಲ್ಲಿ ಜರುಗುತ್ತಿರುವ ಕೆಲವು ಘಟನೆಗಳಿಗೆ ನಿಖರವಾದ ಕಾರಣವನ್ನು ಹೇಳಿ, ಸಾಕ್ಷಿಸಮೇತ ರುಜುವಾತುಪಡಿಸುವಲ್ಲಿ ವಿಜ್ಞಾನದ ಜ್ಞಾನ ಸಾಕಾಗುತ್ತಿಲ್ಲ. ಉದಾ :- ಭಾರತದ ಹಿಮಾಲಯ ಪರ್ವತ ಶ್ರೇಣಿಗಳಲ್ಲಿನ ಕೈಲಾಸ ಪರ್ವತವನ್ನು ಯಶಸ್ವಿಯಾಗಿ ಏರುವುದು ಇಂದಿಗೂ ಸಾಧ್ಯವಾಗುತ್ತಿಲ್ಲ. ಇದುವರೆವಿಗೂ ಒಬ್ಬ ಬೌದ್ಧ ಭಿಕ್ಷು ಮಾತ್ರವೇ ಆ ಪರ್ವತವನ್ನು ಏರಿರುವ ದಾಖಲೆ ಇದೆ ಅಷ್ಟೇ. ಇಂದಿಗೂ ಆ ಪರ್ವತವನ್ನು ಯಶಸ್ವಿಯಾಗಿ ಏರುವ ಪ್ರತಯ್ನವನ್ನು ಅನೇಕರು ಮಾಡುತ್ತಲೇ ಇದ್ದಾರೆ. ಆದರೆ ವಿಫಲವಾಗುತ್ತಿದ್ದಾರೆ. ಅದಕ್ಕೆ ನಿಖರವಾದ ಕಾರಣವೇನೆಂದು ಹೇಳಲು ವಿಜ್ಞಾನ ಸೋತಿದೆ. ಕೇವಲ ಕೇಲವು ಕಾರಣಗಳನ್ನು ಊಹೆಗೆ ಅನುಸಾರವಾಗಿ, ಕೆಲವರ ಹೇಳಿಕೆಗೆ ಅನುಸಾರವಾಗಿ ನೀಡುತ್ತಿದೆ ಅಷ್ಟೇ. ಆದ್ದರಿಂದ ರಾಗೌ ಅವರು ಹೇಳಿದಂತೆ ವಿಜ್ಞಾನದ ಅರಿವು ಲಾಂದ್ರದಿಂದ ಸಿಕ್ಕ ಬೆಳಕಿನಷ್ಟು ಸೀಮಿತವಾಗಿದೆ ಎನ್ನಬಹುದು. ಪ್ರಪಂಚದ ಅನೇಕ ವಿಷಯಗಳನ್ನು ಕುರಿತು ಆಲೋಚಿಸಿದಾಗ ಕವಿಯ ಅಭಿಪ್ರಾಯ ಸತ್ಯವಾಗಿ ತೋರುವುದು. ಜಗತ್ತು ನಿಗೂಢಗಳ ಸರಮಾಲೆ, ಮಾನವನಿಂದ ಸಂಶೋಧಿಸಲ್ಪಟ್ಟ ಸಂಗತಿಗಳು ಕೆಲವು, ಮಾನವನು ಜಗತ್ತಿನ ಬಗ್ಗೆ ಅರಿಯಲು ಆತನಿಗೆ ಇನ್ನೂ ಅಪಾರವಾದಂತಹ ಜ್ಞಾನದ ಅರಿವುಬೇಕಾಗಿದೆ.

ಬಂದ ದೇಹಗಳೆನಿತೊ, ಬರುವ ದೇಹಗಳೆನಿತೊ
ನಡುವೆ ಈ ಬಾಳ ಬಯಲು!
ಯಾರು ಬರೆದರೊ ಇಂಥ ಉಯಿಲು ?!

ಹೀಗೆ ಪದ್ಯದ ಕೆಲವು ಸಾಲುಗಳಲ್ಲಿ ಆ ಅನಂತ ಶಕ್ತಿಯ ಆಗಾಧತೆಯನ್ನು ಕುರಿತು ರಾಗೌ ಅವರು ತಿಳಿಸುತ್ತಾರೆ. ಈ ಜಗತ್ತಿನಲ್ಲಿ ಹುಟ್ಟಿದ ಜೀವರಾಶಿಗಳು ಎಷ್ಟೋ ಜಗತ್ತಿನ ಬಗ್ಗೆ ತಿಳಿಯುತ್ತಾ ಹೋದಂತೆ ಅದರ ಅಗಾಧತೆಯ ಅರಿವು ತಿಳಿಯುತ್ತದೆ.

ಈ ಜಗತ್ತಿನಲ್ಲಿ ಇದುವರೆವಿಗೂ ಬಂದಂತಹ ದೇಹಗಳು ಎಷ್ಟೋ ಅವುಗಳನ್ನು ಕುರಿತು ಸಂಪೂರ್ಣ ಮಾಹಿತಿ ಯಾರಿಗೂ ಇಲ್ಲ. ಮುಂದೆ ಬರುವ ದೇಹಗಳೆಷ್ಟೋ ಅದನ್ನು ಕುರಿತು ಮಾಹಿತಿ ಯಾರಿಗೂ ಇಲ್ಲ. ನಾಲ್ಕು ದಿನದ ಈ ಬಾಳಿನಲ್ಲಿ ಎಷ್ಟೋ ವಿಷಯಗಳ ಅರಿವು ನಮಗಿಲ್ಲ. ಮಾನವನಿಗೆ ಇರುವ ಜ್ಞಾನ ಕೇಲವ ಸೀಮಿತವಾದದ್ದು. ಈ ಬಾಳಿನಲ್ಲಿ ನಮ್ಮ ಇಷ್ಟದಂತೆ ಕೆಲವು ಘಟನೆಗಳು ನಡೆದರೆ, ನಮ್ಮನ್ನು ಮೀರಿ ಕೆಲವು ಘಟನೆಗಳು ನಡೆಯುವುದನ್ನು ನಾವು ಬದುಕಿನಲ್ಲಿ ಕಾಣುತ್ತಿರುತ್ತೇವೆ. ಈ ಘಟನೆಗಳಿಗೆ ಕಾರಣ ಕರ್ತೃ ಯಾರು? ಇದನ್ನು ತಡೆಯಬಲ್ಲವರು ಯಾರು? ಎನ್ನುವುದಕ್ಕೆ ಕೊನೆಗೆ ನೀಡುವ ಅಥವಾ ಸಿಗುವ ಉತ್ತರವು ಸಾಮಾನ್ಯವಾಗಿ ಯಾವುದೋ ಆಗೋಚರಶಕ್ತಿ, ಅತೀಂದ್ರಿಯ ಶಕ್ತಿ ನಮ್ಮನ್ನು ನಿಯಂತ್ರಿಸುವ ಶಕ್ತಿ ಎನ್ನುವುದು ಆಗಿರುತ್ತದೆ. ಈ ಆಗೋಚರ ಶಕ್ತಿಯನ್ನು ಕೆಲವರು ಮತ್ತೇ ಕೆಲವರು ದೇವರು, ಮತ್ತೆ ಕೆಲವರು ಅದೃಷ್ಟ, ದುರಾದೃಷ್ಟ ಸಂದರ್ಭವೆನ್ನುವರು ಇದ್ದಾರೆ. ಹೀಗೆ ಮಾನವನನ್ನು ಮೀರಿದ ಯಾವುದೋ ದಿವ್ಯ ಯಾವುದೋ ಒಂದು ಶಕ್ತಿ ಇದೆ ಎಂದು ಎಲ್ಲರೂ ಒಪ್ಪುವರು.

ಈ ನಿಟ್ಟಿನಲ್ಲಿ ಪ್ರಸ್ತುತ ಕವಿತೆಯಲ್ಲಿ ರಾಗೌ ಅವರು "ಯಾರು ಬರೆದರೋ· ಇಂಥ ಉಯಿಲು! ಎನ್ನುವ ಮಾತನ್ನು ಹೇಳುವರು. ಇಲ್ಲಿ 'ಯಾರೋ' ಎನ್ನುವುದು ಆ ಆಧ್ಯಾತ್ಮಿಕ ಶಕ್ತಿಯನ್ನು ಪ್ರತಿನಿಧಿಸುತ್ತದೆ.

ಮುಗಿಲಿನೊಡಲಿನಲಿ ಇರುವಂತೆ ಗುಡುಗು ಸಿಡಿಲು
ಉಂಡಿಲ್ಲ ನಮಗೆ ಬಹಳ ದಿಗಿಲು!
ಸೋಜಿಗವೆ ಇದು ನಿಜಕು
ಕಥೆಯೊಡಲಾಂತ ವ್ಯಥೆಯ ಬದುಕು!

ಆಕಾಶದಲ್ಲಿ ಮುಗಿಲು ಸುಂದರವಾಗಿ ನೋಡುಗನಿಗೆ ಕಲ್ಪಿಸುವುದು, ಅಂತಹ ಸುಂದರ ಮೊಡವು ತನ್ನಲ್ಲಿ ಭೀಕರತೆಯನ್ನು ಅಡಗಿಸಿಟ್ಟುಕೊಂಡಿರುವುದು ಥಟ್ಟನೆ ಕಲ್ಪಿಸುವುದಿಲ್ಲ. ಪ್ರಕೃತಿಯಲ್ಲಿ ಬದಲಾವಣೆ ಉಂಟಾದಾಗ ಪ್ರಶಾಂತವಾಗಿ ಕಾಣಿಸುವ ಮೊಡದ ಒಡಲಿನಿಂದ ಗುಡುಗಿನ ಅಬ್ಬರವು ಕೇಳಿಸುವುದು. ಸಿಡಿಲಿನ ಭೀಕರತೆಯು ಕಾಣಿಸುವುದು. ಆದರೆ, ಮುಗಿಲಿನ ಹೊರಗಿನ ಪ್ರಶಾಂತತೆಯನ್ನು ನೋಡಿದರೆ ಅದರಲ್ಲಿ ಅಡಗಿರುವ ಅಂಶಗಳನ್ನು ಗಮಿಸಿದಾಗ ಸೋಜಿಗ ಎನ್ನಿಸುವುದು.

ಮಾನವ ಬದುಕು ಕೂಡ ಹೊರಗಿನ ನೋಟಕ್ಕೆ ಸುಲಭವಾಗಿಯೇ ಕಾಣಿಸುವುದು. ಆದರೆ ವಾಸ್ತವ ಬದುಕಿನಲ್ಲಿ ಮಾನವನು ಎದುರಿಸುವ ಸವಾಲುಗಳು, ಕೆಲವೊಮ್ಮೆ ಗುಡುಗು ಸಿಡಿಲಿನಂತೆಯೇ ಇರುತ್ತವೆ. ಅವುಗಳಿಂದ ಉಂಟಾಗುವ ಪರಿಣಾಮವು ಅಗಾಧವಾದುದ್ದು. ಮಾನವನ ಬದುಕಿನ ಕಥೆಯಲ್ಲಿ ನಲಿವು, ವ್ಯಥೆ, ಹೋರಾಟ ಮುಂತಾದ ಸಂಗತಿಗಳನ್ನು ಸೋಜಿಗವನ್ನು ಉಂಟುಮಾಡುವ ರೀತಿಯಲ್ಲಿ ಇರುತ್ತವೆ ಎನ್ನುವ ಅಂಶಗಳನ್ನು ರಾಗೌ ಅವರು ಇಲ್ಲಿ ವ್ಯಕ್ತಪಡಿಸಿದ್ದಾರೆ.

**ಬೀಳಗೊಡದಿರು**

ಸೂರ್ಯನ ಮೂಡುಮುಳುಗುಗಳೆರಡೂ ಕೆಂಪು
ಒಂದು ಹುಟ್ಟು, ಮತ್ತೊಂದು ಸಾವು ;
ನಡುವೆ ಸೇತುಗಟ್ಟಿದೆ ಬಾಳು!
ಬಿರುಕುಗೊಂಡರೆ ನೋವು, ಬೆಸುಗೆಯಲಿ ನಲಿವು ;
ಪಯಣಕ್ಕೆಲ್ಲಿದೆ ಕೊನೆ? ದಡಗಳೆರಡ ಸವರಿ,
ಹರಿದಿದೆ ನೀರು ಶಾನೆ !
ಭಯಪಡುವುದೇಕೆ? ನಾನು ನೀನು ಅವನೂ–
ಸೇರಿ ಇಲ್ಲಿ ನೀರು ಪಾಲು!
ಮುಂದಿರುವ ಬದುಕ ಭುಂಜಿಸುವುದೊಂದೆ ದಾರಿ
ಬೇರೆ ಏನಿದೆ ಹೇಳಿ?!
ಇಂಥ ಬಂಧನದಲೆ ಕನವರಿಸುತಿದೆ ಭಾವ ;
ಅಜೀವ, –

ಸೂರ್ಯನು ಇಡೀ ಜಗತ್ತಿಗೆ ಬೆಳಕನ್ನು ನೀಡುವನು. ಜಗತ್ತಿನ ಜೀವರಾಶಿಗಳೆಲ್ಲರಿಗೂ ಅತಿ ಅವಶ್ಯಕವಾಗಿ ಬೇಕಾದವನು. ಆದರೆ ಅವನಿಗೂ ಮೂಡು ಮುಳುಗು ಎರಡೂ ಇವೆ. ಅ ಎರಡು ನಡೆಯುವ ಸಮಯದಲ್ಲಿ ಅವನು ಕೆಂಪಾಗಿಯೇ ಇರುವನು. ಹಾಗೆಯೇ ಆ ಎರಡು ಘಟನೆಗಳಲ್ಲಿ ಒಂದು ಹುಟ್ಟು ಮತ್ತೊಂದು ಸಾವು ಇವುಗಳ ನಡುವೆ ಜಗತ್ತಿಗೆ ಬೆಳಕನ್ನು ನೀಡುವನು. ತಾನು ಬೆಳಗುವನು. ಹಾಗೆ ಮಾನವನು ಇರಬೇಕಾಗುವುದು ಗಟ್ಟಿಯಾದ ನಿಲುವಿನಿಂದ ಪ್ರವರ್ತಿಸಿದರೆ ಆದ್ದರಿಂದ ಎಲ್ಲರಿಗೂ ನೋವುಂಟಾಗುವುದು. ಎಲ್ಲರೊಂದಿಗೂ ಬೆಸೆದುಕೊಂಡು ಮುಂದೆ ಸಾಗಿದರೆ ನಲಿವು ಸಂತೋಷ ಉಂಟಾಗುತ್ತದೆ. ಮಾನವನ ಪ್ರಯಾಣಕ್ಕೆ ಕೊನೆ ಎಲ್ಲಹುದೊ? ನೀರು ಹರಿಯುವಲ್ಲಿ ದಡಗಳನ್ನು ಸವರಿಕೊಂಡು ನೀರು ಹರಿಯುವಂತೆ ಜೀವನದಲ್ಲಿ ಎಲ್ಲವೂ ಆಶಾಶ್ವನವಾದುದ್ದು. ಬಾಳಿನಲ್ಲಿ ಏನೇ ಬಂದರೂ ಅದನ್ನು ಧೈರ್ಯದಿಂದ ಎದುರಿಸಿ ಬದುಕಬೇಕು. ಅದರ ಹೊರತಾಗಿ ಮತ್ತೇನು ಇಲ್ಲ. ಬಾಳ ಬಂಧನದಲ್ಲಿ ಸಿಲುಕಿ ಈ ಜೀವವು ಕನವರಿಸುತ್ತಲೇ ಇದೆ. ಈ ಜೀವಕ್ಕೆ ಜ್ಞಾನದ ಬೆಳಕನ್ನು ನೀಡಿ ಬಂದನದಿಂದ ಮುಕ್ತಿಯನ್ನು ಹೊಂದುವಂತೆ ಮಾಡಬೇಕು ಎನ್ನುವ ಅಂಶ ಇಲ್ಲ ವ್ಯಕ್ತವಾಗಿದೆ.

ಶಿಲೆಯ ಜೀವನವನ್ನೆ ದೂರವಿಡು
ಕ್ಷಣಿಕವಾದರೂ ಹೂವಿನ ಬಳರಳಿಕೊಳ್ಳಲು ಬಿಡು;
ಬೀಳಗೊಡದಿರು ಬಾಳ,
ತೂರುವ ಸಮಯ ಚೊಳ್ಳಿನ ಜೊತೆ
ಹೋಗಗೊಡದಿರು ಕಾಳ!

ಈ ಮನುಷ್ಯ ಜೀವನವು ಶಿಲೆಯಂತೆ ನಿರ್ಜೀವವಾಗಿ, ನಿರ್ಭಾವದಿಂದ ನಡೆಯತುತಿದೆ. ಸ್ವಲ್ಪ ಕಾಲವಾದರೂ ಹೂವಿನಂತೆ ಕೋಮಲವಗಿ, ಮಧುರವಾಗಿ, ಜೀವಂತಿಕೆಯಿಂದ ಸಾಗುವಂತೆ ಮಡು. ಈ ಬಾಳ ನೌಕೆಯನ್ನು ಜೀವನವೆಂಬ ಸಮುದ್ರದಲ್ಲಿ ಮುಳಗದಂತೆ ಮಾಡು. ಈ ಜೀವನವು ಉತ್ತಮ ರೀತಿಯಲ್ಲಿ ಸಾಗುವಂತೆ ಮಾಡು ಈ ಸಂಸಾರ ಸಾಗರದಲ್ಲಿ ಬಾಳ ಹಡಗು ಗುರಿಸೇರುವಂತೆ ಮಡು. ಅದು ಸಾಧ್ಯವಾಗದು ಓ ಅನಂತಶಕ್ತಿಯೇ ನಿನ್ನ ಅನುಗ್ರಹದಿಂದಲೇ ನಡೆಯುವುದು ಎನ್ನುವ ಭಾವವನ್ನು ಕಲಿ ಇಲ್ಲಿ ವ್ಯಕ್ತಪಡಿಸಿದ್ದಾರೆ.

**ಬೇರೆ ದಾರಿ ಎಲ್ಲಿದೆ**

ಶಾಂತವಾಗು ಮನಸೆ ಶಾಂತವಾಗು, ಕ್ಷೋಬೆಗೊಳ್ಳದಿರು
ನೀನನಂತವನೊಮ್ಮೆ ಸ್ಪರ್ಶಿಸು, ಕ್ಷುಲ್ಲಕವಾಗದಿರು ;
ಕವಿವ ಕಾರ್ಮೋಡಗಳ ನಡುವೆ ಶಿಲೆಯಾಗಿ ನಿಲ್ಲು
ಕಳವಳಗೊಂಡು ಕುಸಿಯದಿರು ; ಗೆಲ್ಲು !

ಮನಸ್ಸು ಶಾಂತವಗಿರಬೇಕು. ಆಗ ಕ್ಷೋಬೆಯಿಂದ ಹೊರಬರುವುದು. ಮನಸ್ಸು ಆ ಅನಂತನ ಆಸರೆಯನ್ನು ಬಯಸಿದಾಗ ಕುಲ್ಲಕ್ಷವಾದ ವಿಚಾರಗಳನ್ನು ಆಲೋಚಿಸದೆ ಶಾಂತವಾಗಿರುವುದು. ಬದುಕಿನಲ್ಲಿ ಕಾರ್ಮೋಡಗಳು ತುಂಬಿದಾಗ ಹೆದರದೆ ಶಿಲೆಯಾಗಿ ನಿಂತು ಕಳವಳವನ್ನು ದೂರಸರಿಸಿ ಬದುಕಿನಲ್ಲಿ ಗೆಲ್ಲಬಹುದು. ಎನ್ನುವ ಸಂದೇಶವನ್ನು ಮನಸ್ಸಿಗೆ ಇಲ್ಲಿ ನೀಡುತ್ತಾರೆ.

ಅನುಭವ ಹಲವು ತೆರ, ತಾರತಮ್ಯವೆಲ್ಲಿದೆ ಅದಕೆ
ಕಲಕುವ ಕಲ್ಲು ಬಿದ್ದೀತು ನಿನ್ನ ಶಾಮತ ಸಾಗರಕೆ
ಗಾಯಾಳುವಾದರೂ ವೀರನಂತೆ ಹೋರುವುದು ಮೇಲು
ಬೇರೆ ದಾರಿ ಎಲ್ಲಿದೆ? ತೋರು ?!

ಜೀವನದಲ್ಲಿ ಹಲವು ತೆರೆನಾದ ಅನುಭವಗಳು ಉಂಟಾಗುತ್ತವೆ. ಬದುಕು ಶಾಂತ ಸಾಗರದಂತೆ ಪ್ರಶಾಂತವಾಗಿದ್ದಾಗ ಎಲ್ಲಿಂದಲೋ ಬಂದಂತಹ ಒಂದು ಕಲ್ಲು ಶಾಂತಿಕಯನ್ನು ಹಾಳುಮಾಡಬಹುದು. ಆದ್ದರಿಂದ ಬದುಕಿನಲ್ಲಿ ಯಾವ ತೊಂದರೆ ಅಡೆ–ತಡೆಗಳು ಬಂದರೂ ಸಹ ಧೈರ್ಯದಿಂದ ಎದುರಿಸಬೇಕು. ವೀರನು ರಣಾಂಗಣದಲ್ಲಿ ಎಷ್ಟೇ ಗಾಯಗೊಂಸರೂ ಸಹ ಕೊನೆಕ್ಷಣದವರೆಗೆ ವೀರನಾಗಿ ಹೋರಾಡುವನು. ಶಸ್ತ್ರಾಸ್ತ್ರವನ್ನು ಕೈಚೆಲ್ಲುವುದಿಲ್ಲ. ಆಗೆ ಜೀವನದಲ್ಲಿ ಹೋರಾಡಬೇಕುಲ. ಆ ಅನಂತಶಕ್ತಿಯ ಆಶೀರ್ವಾದವನ್ನು ಬಯಸುತ್ತಾ ಹೋರಾಡು ಎನ್ನುವ ಸಂದೇಶವನ್ನು ಇಲ್ಲಿ ನೀಡಲಾಗಿದೆ.

> ದುರ್ಬಲ ಕ್ಷಣಗಳಲಿ ಮಾರ್ಬಲವೆ ಮಣಿಯುವುದು
> ಸ್ಥಿರತೆಗಾನು ಮನವೆ, ದೌರ್ಬಲ್ಯಕ್ಕೆಡೆಗೊಡದೆ
> ಕೆಡಕುಗಳಿಗೆ ಮಿಡುಕದೆ ಸದಾ ವರ್ಧಿಷ್ಣುವಾಗು
> ಸತ್ಯದೆಸಕಕೆ ಮತ್ತೆ ದಿಕ್ಕಾಗು !

ಬದುಕಿನ ದುರ್ಬಲ ಲಕ್ಷಣಗಳಲ್ಲಿ ಸ್ಥಿರತೆಯಿಂದ ಇರಬೇಕು. ದೌರ್ಬಲ್ಯವನ್ನು ಮೆಟ್ಟಿನಿಂತು ತೊಂದರೆಗಳಿಂದ ದೂರ ಸರಿಯಬೇಕು. ಎಲ್ಲಾ ಅಡ್ಡಿಗಳನ್ನು ದೂರ ಸರಿಸಿ ಸತ್ಯ ಜಯವು ದಕ್ಕುವಂತೆ ಮಾಡಬೇಕು ಎನ್ನುವ ಭಾವವಿಲ್ಲಿದೆ. ಸತ್ಯವೆಂದರೇ ಆ ಆಧ್ಯಾತ್ಮ ಶಕ್ತಿ ಅದು ಮನುಷ್ಯನನ್ನು ಕೊನೆಗೆ ರಕ್ಷಿಸುತ್ತದೆ ಎನ್ನುವ ಅಭಿಪ್ರಾಯವಿಲ್ಲಿ ವ್ಯಕ್ತವಾಗಿದೆ.

**ದೇಹ ಮತ್ತು ಆತ್ಮ**

> ದೇಹದೊಳಗಾತ್ಮವಿರುವುದು ಭಿನ್ನಾಭಿನ್ನತೆಯೊಲು
> ಹೊರಗಿನೊತ್ತಡವಿರದೆ ಒಂದೆ ತೋರಗೊಡದು ತಾನು
> ಕಾಷ್ಠದೊಳಗ್ನಿಯಿದ್ದರು ಬೆಂಕಿ ಸೋಕದೆ ಉರಿಯದು
> ದ್ವೈತಾದ್ವೈತ ಸಮಕಟ್ಟಿನಲಿ ಬಗೆಯ ಬಂಧಿಸಿರಲು
> ಬಿಸುಟು ದೇಹವನು ಆತ್ಮ ಅಮರವೆಂಬ ವಾದವು
> ಅನುಭವಕೆಟುಕದ ಸಿದ್ಧಾಂತವಲ್ಲದೆ ಬೇರಲ್ಲವು;

ದೇಹ ಮತ್ತು ಆತ್ಮ ಎರಡು ಕೂಡ ಭಿನ್ನತೆಯಿಂದಲೇ ಕೂಡಿವೆ. ದೇಹಕ್ಕೆ ಅಂತ್ಯವಿದೆ. ಆದರೆ ಆತ್ಮಕ್ಕೆ ಅಂತ್ಯವಿಲ್ಲ. ಹೊರಗಿನಿಂದ ನೋಡಿದಾಗ ದೇಹ ಮತ್ತು ಆತ್ಮವು ಒಂದೇ ತರನಾಗಿಯೇ ಕಾಣಿಸುವುದು. ಅವು ಬೇರೆ ಬೇರೆಯಾಗಿ ಕಾಣುವುದಿಲ್ಲ. ಆತ್ಮವು ಇರುವಿಕೆಯನ್ನು ದೇಹದಿಂದ ಗುರ್ತಿಸುತ್ತೇವೆ. ಆತ್ಮ ಅಸ್ಥಿತ್ವವನ್ನು ದೇಹದ ಮೂಲಕ ತಿಳಿದುಕೊಳ್ಳುತ್ತೇವೆ. ಕಾಷ್ಠದೊಳಗೆ ಅಗ್ನಿ ಇದ್ದರೂ ಸಹ ಹೊರಗಿನಿಂದ ಬೆಂಕಿ

ಸೋಕದೆ ಹೇಗೆ ಉರಿಯುವುದಿಲ್ಲವೋ ಆಗೆ ದೇಹ ಆತ್ಮದ ಸಂಬಂಧ. ಯಾವುದೇ ದ್ವೈತ ಮತ್ತು ಅದ್ವೈತದ ಚೌಕಟ್ಟಿನಲ್ಲಿ ಆಲೋಚಿಸಿದರೂ ಸರಿ ದೇಹ. ಆತ್ಮದ ಅಸ್ತಿತ್ವ ಬೇರೆ ಬೆರೆ ಎಂದೆ ಸಿದ್ಧಾಂತವನ್ನು ಮಂಡಿಸುವರು. ಈ ವಾದವು ಅನುಭವಕ್ಕೆ ಏಟುಕದ ಸಿದ್ಧಾಂತವಾಗಿದೆ.

ಬಯಲೊಳಗೆ ಬಾಳನೆದುರಿಸಲಾರದ ಮಾವನ
ಕಟ್ಟಿಕೊಂಡಿಹ ಕಥೆಗಳದರ ರೋಚಕ ಇತಿಹಾಸ
ಇರುಳು ಗೂಡಲಿ ಕೂಡಿ ಹಗಲು ಅಗಲುವ ಹಕ್ಕಿಗಳಂತೆ
ಕೂಡಿ ಒಡೆಯುವ ಕ್ರಿಯೆಯೆ ತಾ ಸರಳ ವೇದಾಂತ ;

ಈ ಪ್ರಪಂಚವೆಂಬ ಬಯಲಿನಲ್ಲಿ ಬಾಳನ್ನು ನಡೆಸುವಾಗ ಬರುವ ಸಮಸ್ಯೆಗಳನ್ನು ಎದುರಿಸಲಾರದೆ ಮಾನವನು ಹಿಂದೆ ಸರಿಯುವನು. ಈ ಸಮಸ್ಯೆಗಳಿಂದ ತಪ್ಪಿಸಿಕೊಂಡಿದ್ದನ್ನು ಸಮರ್ಥಿಸುವ ಸಲುವಾಗಿ ತನ್ನದೆ ಆದ ಕಾರಣವನ್ನು ನೀಡುವುದು ರೋಚಕ ಇತಿಹಾಸದಂತೆ ಅನ್ನಿಸುವುದು. ಹಕ್ಕಿಗಳೂ ಕತ್ತಲೆ ಆವರಿಸಿದಾಗ ಇರುಳಿನಲ್ಲಿ ಒಂದೇ ಗೂಡಿನಲ್ಲಿ ಅನುಸರಿಸಿಕೊಂಡು ಇರುತ್ತವೆ. ಆಗ ಅದು ಅವುಗಳಿಗೆ ಅನಿವಾರ್ಯವಾಗಿರುತ್ತದೆ. ಆಸರೆ ಇಲ್ಲದೆ ಬದುಕುವುದು ಕಷ್ಟವೆನಿಸಿ ಸುಮ್ಮನಾಗಿರುತ್ತವೆ. ಆದರೆ ಬೆಳಕಾಗುತ್ತಿದ್ದಂತೆ ಒಂದಕ್ಕೊಂದು ಮುನಿಸಿಕೊಂಡು ಬೇರೆಯಾಗುತ್ತಲೆ. ಇದು ಒಂದು ಸರಳ ವೇದಾಂತದಂತೆ ಮಾನವನ ಜೀವನಕ್ಕೂ ಅನ್ವಯಿಸುತ್ತದೆ ಎಂದಿದ್ದಾರೆ ಕವಿ.

ರಾಗ ಮೂಲದಲಿ ವಿರಾಗವನಿರಿಸಿ ಸಕಲ ದುಃಖಕೆ
ಕಾರಣವಾದುದರ ಮೇಲೆ ದಾಳಿನಡೆಸುವುದೆ ಆಧ್ಯಾತ್ಮ
ಆತ್ಮ ಅನಾತ್ಮಗಳ ಅಜ್ಞೇಯತೆಯೆ ನಮಗಿರುವ ಪರ್ಯಾಯ
ವಾದ ವಿವಾದಗಳಲಿ ಜಟಿಲವಾಗುತಿದೆ ತತ್ವವಿಚಾರ!

ಸಕಲ ದುಃಖಕ್ಕೆ ಕಾರಣವಾಗುವ ಕೆಟ್ಟಶಕ್ತಿಯನ್ನು ನಿಗ್ರಹ ಮಾಡುವುದು ಆಧ್ಯಾತ್ಮಶಕ್ತಿಯಾಗಿದೆ. ದುಷ್ಟ ಶಿಕ್ಷೆ ಶಿಷ್ಟ ರಕ್ಷೆ ಎನ್ನುವಂತೆ ಕೆಟ್ಟಿದ್ದರ ಅಳಿವು ಮತ್ತು ಒಳ್ಳೆಯದರ ರಕ್ಷಣೆನ್ನು ಮಾಡುವುದು ಆಧ್ಯಾತ್ಮ ಶಕ್ತಿಗಿದೆ. ಹೀಗೆ ಜನರು ಆತ್ಮ ಮತ್ತು ಆಧ್ಯಾತ್ಮದ ನೆಲೆಯಲ್ಲಿ ಚರ್ಚಿಸುವುದು ಸಹಜ. ಹೇಗೆ ಆತ್ಮ ಮತ್ತು ಆಧ್ಯಾತ್ಮಗಳು ತತ್ವ ವಿಚಾರವು ಜಟಿಲವಾಗಿ ತೋರುವುದು ಎಂಬುದನ್ನು ಕವಿಯು ತಿಳಿಸುವರು.

ನಲಿವಿಗಾಗುವುದಕ್ಕಿಂತ ನೋವಿಗಾಗುವುದು ಮೇಲು
ಸಕಲ ಜೀವರಾಶಿಗಳ ಅಳಲನಳಿಸುವುದು
ಅಕಳಂಕ ನೀನೆ ಅದರೊಳಗಿರು.
ತನ್ನ ಮೂಗಿನ ನೇರಕೆ ಕಾಂಬವರಿಗೇನು ಕಡಿಮೆಯೆ
ಪರರ ಅನುಕೂಲಕೆ ಮಿಡಿಯದಿದ್ದರೆ ಹೇಗೆ?
ಸರ್ವ ರುಜೆಗೂ ನೀನೆ ಪರಿಹಾರವಾಗು.
ಪೀಡೆಯೆ ಕ್ರೀಡೆಯಾಗುತಿಹ ರಕ್ತಲೋಕದೊಳಗೆ
ಮಂಡಕ್ಕೆ ತಿನುವವರ ಸಂಖ್ಯೆ ಹೆಚ್ಚುತಿದೆ ಕಂಡೆಯಾ
ದಂಡಿಸುವಗೆ ನೀನೆ ದಂಡಧರನಾಗಬಲ್ಲೆಯಾ!

ಮಾನವನು ತನ್ನ ಸುತ್ತಲಿನ ಸಮಾಜದೊಂದಿಗೆ ಸ್ಪಂದಿಸುವುದು ಅವನ ಸಹಜ ಪ್ರಕ್ರಿಯೆ. ಆದರೆ ಕೆಲವರು ಸಂತೋಷವನ್ನು ಮಾತ್ರವೇ ಹಂಚಿಕೊಳ್ಳುವರು. ಬೇರೆಯವರು ತೊಂದರೆಯಲ್ಲಿದಾಗ ಅದರ ಅರಿವಿಲ್ಲದಂತೆ ವರ್ತಿಸುವರು. ಆದರೆ ಈ ವ್ಯವಸ್ಥೆ ಬದಲಾಗಬೇಕು. ಪರರ ಸಂತೋಷದಲ್ಲಿ ಭಾಗಿಯಾಗುವುದಕ್ಕಿಂತ ಹೆಚ್ಚಾಗಿ ಅವರ ದುಃಖದಲ್ಲಿ ಭಾಗಿಯಾಗಿ ಸಹಾಯ ಮಾಡಬೇಕು. ಅದು ನಿಜವಾದ ಸಹಾಯ, ನೈಜ ಮಾನವತ್ವ ಸಕಲ ಜೀವರಾಶಿಗಳ ದುಃಖವನ್ನು ಅಳಿಸುವವನೇ, ಕಳಂಕ ರಹಿತನಾಗಿರುವವನೇ ನೊಂದವರ ದುಃಖಕ್ಕೆ ಸ್ಪಂದಿಸುವವನೇ ನೀನು ಅದರಲ್ಲಿ ಇರು.

ತಮ್ಮ ಮನಸ್ಸಿಗೆ ತೋಚಿದಂತೆ ನೋಡುವವರು, ಮಾತನಾಡುವವರು ತುಂಬಾ ಜನರು ಇದ್ದಾರೆ. ಆದರೆ ಪರೋಪಕಾರವನ್ನು ಮಾಡದಿದ್ದರೆ ಸರಿಯೇ? ಆದ್ದರಿಂದ ಸರ್ವ ರೋಗಗಳನ್ನು ಪರಿಹಾರ ಮಾಡುವವನಾದ ಭಗವಂತ, ಜನರನ್ನು ಪೀಡಿಸುವುದೇ ಒಂದು ಆಟವಾಗಿದೆ ಇಂದು ಕೆಲವು ಜನರಿಗೆ ಅವರು ಅದರಲ್ಲೇ ಸಂತೋಷ ಕಾಣುವರು ಅಂತಹವರನ್ನು ಶಿಕ್ಷಿಸುವವನು ನೀನು ಅಗು ಎಂದು ಆ ಭಗವಂತನಲ್ಲಿ ಕವಿ ಕೇಳುವುದನ್ನು ಈ ಸಾಲುಗಳಲ್ಲಿ ಕಾಣಬಹುದು.

ತಳಮಳಕೆ ತಡೆಯಿಲ್ಲದೆ ಕಳವಳಕೆ ಒಳಗಾಗುತಿರೆ
ಹೃದಯವಿದ್ದವರ ಮಧ್ಯೆ ಬೆಳೆಯುತಿಹ ಸಮಸ್ಯೆ
ದೊರೆಯಬಹುದೆ ತಂದೆ ಧನ್ವಂತರಿಯ ಚಿಕಿತ್ಸೆ!
ಕಾಯುವುದೆ ಕೆಲಸವಾಗುವುದು ಬೇಡ
ಹೇಳಿಕೆಯೊಳಗೆ ಹಾವಿಲ್ಲವೆಂದು ಖಾತರಿಯಾಗಲಿ ಬೇಗ
ಸಂತವಿಡು ನಿಂತು ದಮನಗೊಂಡವರ ಪರ!

ಬೇಡಿದ ಹೊಲಕೆ ಮಳೆಯಾಗುತ್ತಿಲ್ಲ; ವ್ಯತ್ಯಸ್ತಗಳ
ದುರಭಿಸಂಧಿಗೆ ಮಿಂಚುಗುಡುಗು ಮೌನವಾಗುತಿವೆ;
ನಿನ್ನ ತತ್ವಬದ್ಧ ದೃಷ್ಟಿಕೂಡ!
ನಾನೆ ಬೇಡಿದೆನೇನು ಈ ಎಲ್ಲ ಕಲಸುಮೇಲೋಗರವ
ಕಾರ್ತಿಕದ ಕತ್ತಲಲಿ ದೀಪ ಹಚ್ಚುವವರಾರು;
ಅನಾಮಿಕ ಹಡಗಿಗೆ ನೀನೇ ನಾವಿಕನಾಗು!

ಜನರಲ್ಲಿ ತಳಮಳವೆನ್ನುವುದು ಹೆಚ್ಚಾಗಿ ತೊಂದರೆ ಪಡುತ್ತಿದ್ದಾರೆ. ಅವರ ಸಮಸ್ಯೆಗೆ ಚಿಕಿತ್ಸೆ ನೀಡುವ ಧನ್ವಂತರಿ ಯಾಗೂ ದೇವ, ನೊಂದ ಜೀವಗಳಿಗೆ ಶಾಂತಿಯನ್ನು ಸಂತೋಷವನು ನೀಡು. ಕಾರ್ತಿಕ ಮಾಸದ ಕಗ್ಗತ್ತಲನ್ನು ನೀಗಿಸಲು ದೀಪ ಹಚ್ಚುವ ರೀತಿ ಅನಾಮಿಕ ಹಡಗಿಗೆ ನೀನೇ ನಾವಿಕನಾಗಿ ನೊಂದವರ ಕಷ್ಟಗಳಿಗೆ ಅಂತ್ಯವನ್ನು ನೀಡು ಎಂದು ಆ ದೇವರಲ್ಲಿ ಕವಿಯು ಕೇಳಿಕೊಳ್ಳುವರು.

## ಅಧ್ಯಾಯ-೪

# ಆತ್ಮ ನಿವೇದನೆಗೆ ಸಂಬಂಧಿಸಿದ ಕವಿತೆಗಳು

**ಪ್ರಾರ್ಥನೆ**

ಬಾಳ ತಿದ್ದುವ ಹಾದಿ ರೂಢಗೊಳ್ಳಲಿ ಮುದದಿ
ಬೇಕು ಬೇಡಗಳಾಚೆ ತೆರೆದು ನಿಲ್ಲಿಸಲಿ ಮನವ
ಒಳಗೊಳಗೆ ಲೋಪಗಳನು ಸರಿಪಡಿಸುತ, ದೀಪಗಳನು
ಉರಿಸುತೊಸಗೆಯ ಬೀರಿ ಬೆಸುಗೆಗೊಳ್ಳಲಿ ಜೀವ

ಪ್ರಾರ್ಥನೆ ಎಂಬ ಈ ಪದ್ಯವು ಮೊದಲ ಪ್ರಾರ್ಥನೆ ಪದ್ಯಕ್ಕಿಂತ ಭಿನ್ನವಾಗಿದೆ. ಬಾಳನ್ನು ಸರಿದಾರಿಗೆ ನಡೆಸುವ ದಾರಿಯು ರೂಪುಗೊಳ್ಳಬೇಕು. ಅದು ಮಾನವ ಸಹಜವಾದಂತಹ ಬೇಕು ಬೇಡಗಳ ಆಚೆ ಇರಬೇಕು. ಮಾನವನಲ್ಲಿನ ಆಸೆ, ಆಕಾಂಕ್ಷೆ, ನೋವು-ನಲಿವುಗಳನ್ನು ಸರಿಸಿ ಮುಂದೆ ಸಾಗುವಂತೆ ಇರಬೇಕು. ಆ ದಾರಿಯು ಮಾನವನ ಬದುಕಿನ ನಿಜವಾದ ಗಮ್ಯವಾಗಿರಬೇಕು. ಮಾನವನ ಜೀವನದಲ್ಲಿ ಅನೇಕ ಘಟನೆಗಳು ನಡೆಯುತ್ತವೆ. ಕೆಲವು ಮನುಷ್ಯನ ಗಮನಕ್ಕೆ ಬಂದು ನಡೆಯುತ್ತವೆ. ಕೆಲವು ಘಟನೆಗಳು ಅವನನ್ನು ಮೀರಿನಡೆಯುತ್ತವೆ. ಮನುಷ್ಯನಿಂದ ಕೆಲವು ತಪ್ಪುಗಳು ನೇರವಾಗಿ ಹಾಗುತ್ತವೆ. ಮತ್ತೆ ಕೆಲವು ತಪ್ಪುಗಳು ಮನುಷ್ಯನ ಅರಿವಿಗೆ ಬಾರದಂತೆ ನಡೆಯುತ್ತವೆ. ಮನುಷ್ಯನು ಒಳಿತಾದ ಘಟನೆಗಳಿಗೆ ಕಾರಣವಾದಾಗ ಅವನ ಜೊತೆ ಇರುವವರು ಮತ್ತು ಅವನು ಇಬ್ಬರೂ ಸಂತೋಷದಿಂದಲೇ ಬದುಕುವರು. ಆದರೆ ಕೆಟ್ಟ ಘಟನೆಗಳು ನಡೆದಾಗ ಎಲ್ಲರೂ ಭಾದೆ ಪಡುತ್ತಾರೆ. ಆದ್ದರಿಂದ ಮನುಷ್ಯನು ತನ್ನಲ್ಲಿನ ಲೋಪದೋಷಗಳನ್ನು ಸರಿಪಡಿಸಿಕೊಂಡು ಜೀವನದಲ್ಲಿ ಮುಂದೆ ಸಾಗಬೇಕು. ತನ್ನಿಂದ ಬೇರೆಯವರಿಗೆ ಕೆಡುಕಾಗದಂತೆ, ತನ್ನ ಜೀವನವನ್ನು ಸರಿಯಾದ ಪಥದಲ್ಲಿ ಮುಂದುವರಿಸಬೇಖು. ಆಗ ಆ ಮನುಷ್ಯನು ಒಬ್ಬ ಮಾನವೀಯತೆಯುಳ್ಳ ಮನುಷ್ಯನಾಗುವನು. ಸಮಾಜದಲ್ಲಿ ಸತ್ಪ್ರಜೆಯಾಗುವನು. ಅವನಿಂದ ಸಮಾಜವು ಕೂಡ ಶಾಂತಿಯಿಂದಲೇ ಇರುತ್ತದೆ. ಎಂಬುದು ಕವಿಯ ಅಭಿಪ್ರಾಯವಾಗಿದೆ.

ಹೀಗೆ ಬದುಕಿಗೊಂದು ಸ್ಪಷ್ಟ ಸಿದ್ಧಾಂತವೊಂದನ್ನು ರೂಪಿಸಿಕೊಂಡ ಕವಿ ಅಂತರಂಗದ ಶೋಧನೆಯ ಮೂಲಕ ಶುದ್ಧತೆಯನ್ನು ನಿರೀಕ್ಷೆ ಮಾಡುತ್ತಾರೆ. ಸಮಾಜದಲ್ಲಿ ಇಲ್ಲದ ಸಾಮರಸ್ಯವನ್ನು ನಮ್ಮೊಳಗೆ ನಾವು ತಿದ್ದಿಕೊಳ್ಳುವ ಮೂಲಕ ಸಾಧಿಸಬಹುದು ಎನ್ನುವ ಕವಿಯ ಅಭಿವ್ಯಕ್ತಿ ಇಲ್ಲಿ ವ್ಯಕ್ತವಾಗಿದೆ.

## ಭಾವ ಕರ್ಪೂರ

ಭಾವನೆಗಳೆಲ್ಲ ಮಾತುಗಳಾಗುವುದಿಲ್ಲ
ಮಾತುಗಳೆಲ್ಲ ಕವನಗಳಾಗುವುದಿಲ್ಲ ;
ಮೌನಕಂದರದಲ್ಲಿ ಬಿಕ್ಕುತ್ತವೆ
ಸೋತ ಹಾಡಿನ ಪಲ್ಲವಿ.
ಹನಿಯುತ್ತದೆ ಕಂಬನಿ !

ಮನುಷ್ಯನ ಮನಸ್ಸಿನಲ್ಲಿ ಪ್ರತಿಕ್ಷಣವು ಅನೇಕ ಭಾವನೆಗಳು ಮೂಡುತ್ತಿರುತ್ತವೆ. ಆದರೆ ಎಲ್ಲವನ್ನು ಮಾತುಗಳಲ್ಲಿ ಹೇಳಲಾರೆ. ನಮ್ಮ ಮನಸ್ಸಿನ ಅನೇಕ ಮಾತುಗಳು ನಮ್ಮಲ್ಲೆ ಉಳಿದು ಹೋಗುವುವು. ಕೆಲವೊಮ್ಮೆ ಕೆಲಮಾತುಗಳನ್ನು ಅನಿರೀಕ್ಷಿತವಾಗಿ ಹೇಳುತ್ತೇವೆಯೆ ಹೊರತು ಎಲ್ಲವನ್ನು ಹೇಳಲಾರೆವು. ಎಲ್ಲಾ ಭಾವನೆಗಳನ್ನು ಮಾತಿನ ಮೂಲಕ ವ್ಯಕ್ತಪಡಿಸಲಾರೆವು. ನಮ್ಮ ಅಂತರಂಗದಲ್ಲಿನ ಭಾವನೆಗಳಲ್ಲೆವನ್ನು ಮಾತಿನಮೂಲಕ ಬೇರೆಯವರೊಂದಿಗೆ ಹಂಚಿಕೊಳ್ಳಲಾರೆವು. ಹಾಗೆಯೇ ಎಲ್ಲ ಮಾತುಗಳು, ಎಲ್ಲರೂ ಆಡುವ ಮಾತುಗಳು ಸಹ ಕವನಗಳಾಗಿ ಹೊರಹೊಮ್ಮಲಾರವು. ಕವನಗಳಾಗಲೂ ಆ ಮಾತಿಗೆ ವಿಶಿಷ್ಟತೆ ಇರಬೆಕಾಗುವುದು. ಸುಮ್ಮನೆ ಆಡುವ ಕೆಲ ಮಾತುಗಳು ಕಳೆಯು ಮಾತನಾಡುತ್ತೇವೆ. ಮತ್ತೆ ಕೆಲವೊಮ್ಮೆ ಸಾಂದಾರ್ಭಿಕವಾಗಿ ಮಾತನಾಡುತ್ತೇವೆ. ಹೀಗೆ ಮಾತು ವಿವಿಧ ರೂಪದಲ್ಲಿ ವ್ಯಕ್ತವಾಗುತ್ತದೆ.

ಕೆಲವು ಸಂದರ್ಭದಲ್ಲಿ ಮಾತು ಮನಸ್ಸಿನಿಂದ ಹೊರಟರು ಧ್ವನಿ ರೂಪವನ್ನು ಪಡೆಯಲಾರದೆ ಮೌನವಾಗಿಯೆ ಬಿಕ್ಕುತ್ತ ಉಳಿಯುತ್ತದೆ. ಅಂತಹ ಸಂದರ್ಭದಲ್ಲಿ ಮಾನವನು ಉದ್ವೇಗ, ನೋವು, ಸಂಕಟ, ತಳಮಳ, ಮುಂತಾದ ಭಾವಗಳನ್ನು ಅನುಭವಿಸುತ್ತಿರುತ್ತಾನೆ. ಈ ಯಾವುದಾದರೊಂದು ಸ್ಥೀತಿಯಲ್ಲಿ ಮಾನವನಿದ್ದಾಗ ಮಾತುಗಳು ಮನಸ್ಸಿನಲ್ಲಿಯೇ ಉಳಿದು ಮೌನ ಮಾತ್ರವೇ ಹೊರಹೊಮ್ಮುವುದು. ಅದು ಸೋತ ಹಾಡಿನ ನಿರಾಶೆಯ ಪಲ್ಲವಿಯ ಹಾಗೆ ತೋರುವುದು ಕೇವಲ ಬಿಸಿಯಾದ ಕಣ್ಣೀರ ಹನಿಗಳು ಮಾತ್ರವೆ ಹೊರಹೊಮ್ಮುತ್ತವೆ. ಇದೇ ರೀತಿ ಆನಂದದ ಅತಿರೇಖದಲ್ಲಿದ್ದಾಗ ಮಾತು ಬಾರದೇ ಕೇವಲ ಕಣ್ಣೀರು ಮಾತ್ರವೇ ಆನಂದಭಾಷ್ಪವಾಗಿ ಹೊರಹೊಮ್ಮುವುದು.

ಹಡಗು ಹೋಗುವುದ ನೋಡಿದರೆ
ಮೇಲೆ ತೇಲಿದಷ್ಟೆ ಸತ್ಯವೆನಿಸುತ್ತದೆ ;
ಆದರದರ ಮುಕ್ಕಾಲುಪಾಲು ನೀರೊಳಗೆ
ಕಂಡುದರ ಬೇರು ಕಾಣದುದರ ತಳಗೆ,
ಸತ್ಯ ಸಾಪೇಕ್ಷವೇ?!

ಸಮುದ್ರದ ಅಲೆಗಳ ಮಧ್ಯೆ ಹಡಗು ಹೋಗುವುದನ್ನು ದೂರದಿಂದ ನೋಡಿದರೆ ಅದು ನೀರಿನ ಅಲೆಗಳ ಮೇಲೆ ತೇಲಿದಂತೆ ಅನ್ನಿಸುತ್ತದೆ. ನಾವು ಅದನ್ನೇ ಸತ್ಯವೆಂದು ಕೊಳ್ಳವೆವು. ಆದರೆ ಆ ಬೃಹತ್ ಹಡಗು ಸಮುದ್ರದ ನೀರಿನ ಮೇಲೆ ಕಾಲುಭಾಗ ಮಾತ್ರವೇ ಗೋಚರಿಸುವುದು. ಅದರ ಮುಕ್ಕಾಲು ಭಾಗ ನೀರಿನ ಒಳಗೆ ಇರುವುದು. ಆದ್ದರಿಂದ ಬದುಕಿನಲ್ಲಿ ನಾವು ಮೇಲ್ನೋಟಕ್ಕೆ ಕಾಣುವುದೆಲ್ಲ ಸತ್ಯವಲ್ಲ. ಅದರ ಆಚೆ ಬೇರೆ ಸತ್ಯಗಳು ಇರುತ್ತವೆ ಎಂಬುದನ್ನು ನವು ತಿಳಿಯಬೇಕು. ನಾವು ಸತ್ಯವೆಂದು ಕಮಡುಕೊಂಡದ್ದಕ್ಕಿಂತ ಸತ್ಯವು ಬೇರೆಯೆ ಇರಬಹುದು ಎಂಬುದನ್ನು ನಾವು ಅರ್ಥಮಾಡಿಕೊಳ್ಳಬೇಕು ಎನ್ನುವ ಅಭಿಪ್ರಾಯವು ಇಲ್ಲಿ ವ್ಯಕ್ತವಾಗಿದೆ.

ಹುಟ್ಟಿದ ಮೋಡಗಳಲ್ಲಿ ಮಳೆ ಸುರಿಸವು
ಸುರಿಸಿದರೂ ಮುಖ್ಯ ಘಟ್ಟ ಸಾಲು ;
ಉಳಿದುದರಿಂದಲೇ ಫಸಲು ಫಲ
ಬಂದೀತೆಂದರೆ ನೆಮ್ಮದಿ ಸುಖ,
ಇಲ್ಲದಿರೆ ಸ್ಥಿತಿ ದುರ್ಭರ!

ಆಕಾಶದಲ್ಲಿ ಉಂಟಾದ ಮೋಡಗಳೆಲ್ಲವು ಮಳೆಯನ್ನು ಸುರಿಸುವುದಿಲ್ಲ. ಕೆಲವು ಮೋಡಗಳು ಸಾಕಷ್ಟು ಮಳೆಸುರಿಸುತ್ತವೆ. ಮೋಡಗಳು ಮಳೆಸುರಿಸುವುದರಿಂದ ಭೂಮಿಯಲ್ಲಿ ಉತ್ಕೃಷ್ಟ ಫಸಲು ಬರುತ್ತದೆ. ಆಗ ಎಲ್ಲಾ ಜನರಿಗೆ ಆಹಾರವು ದೊರಕುವುದು. ಪ್ರಾಣಿಗಳಿಗೂ ಆಹಾರ, ನೀರು ದೊರಕುವುದು. ಪ್ರಕೃತಿಯು ಹಸಿರಿನಿಂದ ಕಂಗೊಳಿಸುತ್ತಾ ಇರುತ್ತದೆ. ಆಗ ಆಹ್ಲಾದಕರ ವಾತಾವರಣವು ಸೃಷ್ಟಿಯಾಗಿ ಮನಸ್ಸಿಗೆ ಮುದ ನೀಡುವುದು. ಒಂದು ವೇಳೆ ಮಳೆಯು ಬರದೆ ಹೋದರೆ ಜನರು ಅನಾವೃಷ್ಟಿಯಿಂದ ಬಳಲಬೇಕಾಗುವುದು. ಆಹಾರದ ಕೊರತೆ ಉಂಟಾಗಿ ಹಸಿವಿನಿಂದ ಜನರು, ಪ್ರಾಣಿಗಳು ಕಷ್ಟಪಡಬೇಕಾಗುವುದು. ಪ್ರಕೃತಿಯಲ್ಲಿ ನೀರಿನ ಕೊರತೆಯಿಂದ ಬರಗಾಲವೇರ್ಪಷ್ಟು ಅನೇಕ ಸಮಸ್ಯೆಗಳು ತಲೆದೋರುತ್ತವೆ. ಇಡೀ ವಾತಾವರಣವು ಏರುಪೇರಾಗಿ ಜೀವನವು ದುರ್ಭರವಾಗುವುದು. ಆದ್ದರಿಂದ ಹುಟ್ಟಿದ ಮೋಡಗಳೆಲ್ಲವೂ ಹೇಗೆ ಸತ್ಫಲವನ್ನು ನೀಡಲಾರವೊ ಹಾಗೆಯೇ ಮಾನವರ ಎಲ್ಲ ಮಾತುಗಳು ಸದಾಭಿಪ್ರಾಯವನ್ನು ಉಂಟು ಮಾಡಲಾರವು.

ನಲಿವಿನಾಳದಲ್ಲೆಲ್ಲೋ ನೋವಿನ ಮಿಡಿತ
ತಪ್ಪದೆ ಮಿದಿಯುತ್ತಿದೆ ಬದುಕ ;
ಭಾವ ಉರಿಯುವ ಕರ್ಪೂರದಂತೆ
ಅಲ್ಲಿಯವರೆಗೆ ಎಷ್ಟೊಂದು ತವಕ !

ಮನುಷ್ಯನು ಸಂತೋಷದಿಂದ ಇದ್ದಂತಹ ಸಂದರ್ಭದಲ್ಲಿಯೂ ಅವನ ಮನಸ್ಸಿನಲ್ಲಿ ಕೆಲವೊಮ್ಮೆ ನೋವಿನ ಛಾಯೇ ಹಾಗೆಯೇ ಸುಳಿದು ಹೋಗುವಂತಹ ಸಂದರ್ಭಗಳು ಅನೇಕ ಭಾರಿ ಎದುರಾಗುವವು. ಆ ನೋವಿನ ಕಹಿ ನೆನಪು ಕ್ಷಣಕಾಲ ಮನಸ್ಸನ್ನು ಭಾದಿಸುತ್ತದೆ. ಅದು ಎಲ್ಲರಲ್ಲೂ ಸರ್ವೆ ಸಾಮಾನ್ಯವಾದುದ್ದು. ಆದರೆ ಆ ನೋವು ಸಂತೋಷದ ಸಂದರ್ಭದಲ್ಲಿ ಅತಿ ಹೆಚ್ಚು ಕಾಲ ನಿಲ್ಲಲಾರದು. ಯಾವುದೇ ಒಂದು ಭಾವನೆಯು ಅದಕ್ಕಿಂತ ತೀವ್ರವಾದ ಭಾವನೆಯನ್ನು ಮಾನವ ಅನುಭವಿಸುವಾಗ ತನ್ನ ಪ್ರಭಾವವನ್ನು ಗಾಢವಾಗಿ ಬೀರಲಾರದು. ಅದು ಕರ್ಪೂರದ ಉರಿಯಂತೆ ಕೆಲವು ಕ್ಷಣಗಳವರೆಗೆ ಮಾತ್ರವೆ ಪ್ರಭಾವಬೀರಬಲ್ಲದು. ಆದರೆ ಆ ಭಾವನೆಯು ಬೀರುವ ಪ್ರಭಾವದಿಂದ ಮನುಷ್ಯನು ಪಡುವ ತವಕವು ಸಾಮಾನ್ಯವಾದುದ್ದಲ್ಲ ಎನ್ನಬಹುದು.

ಒಂದು ಭಾವನೆಯು ಸುಮ್ಮನೆ ಹಾಗೆ ಮನುಷ್ಯನ ಮನಸ್ಸಿನಲ್ಲಿ ಹಾದು ಹೋದರು ಸಹ ಆ ಭಾವನೆಯನ್ನು ತನ್ನ ಪ್ರಾಭವವನ್ನು ಬೀರುತ್ತದೆ.

ಆದ್ದರಿಂದ ಮಾತುಗಳು ಕೆಲವೊಮ್ಮೆ ಮನಸ್ಸಿನಲ್ಲೆ ಉಲಿಯುತ್ತವೆ. ಎಲ್ಲ ಮತುಗಳು ಹೊರಬರಲಾರವು ಮತಿನ ಹಾಗೆಯೇ ನವು ನೋಡುವ ದೃಶ್ಯದ ಅರ್ಥವನ್ನು ಪೂರ್ಣವಾಗಿ ನಮಗೆ ಗ್ರಹಿಸಲು ಸಾಧ್ಯವಾಗದು. ಮೋಡಗಳೆಲ್ಲವೂ ಮಳೆಸುರಿಸಲಾರವು. ಮನಸ್ಸಿನ ಭಾವನೆಗಳೆಲ್ಲವೂ ಆಕಾಶದಲ್ಲಿನ ಹೆಚ್ಚು ಕಾಲ ತಮ್ಮ ಪ್ರಭಾವವನ್ನು ಮನುಷ್ಯನ ಮೇಲೆ ಬೀರಲಾರವು. ಕರ್ಪೂರವು ಹೇಗೆ ಕ್ಷಣಕಾಲ ಮಾತ್ರವೆ ಉಳಿಯಬಲ್ಲವೋ ಹಾಗೆ ಇವುಗಳು ತಮ್ಮದೇ ಆದ ನೆಲೆಗಟ್ಟನ್ನು ಹೊಂದಿವೆ. ಹಾಗಾಗಿ ಇಲ್ಲಿ ಕವಿಯು ಬದುಕಿನ ನೈಜತೆಯ ಬಗ್ಗೆ ಸ್ಪಷ್ಟವಾಗಿ ವಿವರಿಸುವರು.

**ನನ್ನೊಳೇನಿದೆ ಹೇಳು**

ಹೇಳಿ ಕೊಳ್ಳಲೆನಗೆ ನನ್ನೊಳೇನಿದೆ ಹೇಳು
ಆಕರ್ಷಣೆಯಿಲ್ಲದ ಹೂವು;
ಸುಂದರವಲ್ಲದೆ ಪರಿಮಳವಿಲ್ಲದೆ
ಭ್ರಮರವಿತ್ತ ಬಾರವು !

ನನ್ನಲ್ಲಿ ಹೇಳಿಕೊಳ್ಳಲು ವಿಶೇಷವಾದುದು ಏನೂ ಇಲ್ಲ. ಆಕರ್ಷಣೆ ಇಲ್ಲದ ಹೂವಿನಂತೆ ನಾನು. ಸೌಂದರ್ಯ ಮತ್ತು ಪರಿಮಳವಿಲ್ಲದ ಹೂ. ಆದ್ದರಿಂದ ದುಂಬಿಗಳೂ ಸಹ ನನ್ನ ಬಳಿಗೆ ಬರುವುದಿಲ್ಲ. ನಾನು ಯಾರಿಗೂ ಬೇಡವಾದ ವಸ್ತುವು ಆಗಿ ಕಾಣಿಸುತ್ತೇನೆ ಎನ್ನುವುದನ್ನು ಇಲ್ಲಿ ಹೇಳಿದ್ದಾರೆ.

ಹೇಳಿಕೊಳ್ಳಲೆನಗೆ ನನ್ನೊಳೇನಿದೆ ಹೇಳು
ಉಲಿಯಲಾರದ ಕೊಳಲು;
ನಾದವಿರದೆನ್ನ ಒರಟು ಹಾಡಿಗೆ
ಲೋಗರೆಂತು ಒಲಿವರು !

ಶ್ರೇಷ್ಠವಾದ ವಿಷಯವು ನನ್ನಲ್ಲಿ ಇರುವುದೆಂದು ಹೇಳಿಕೊಳ್ಳಲು ನನ್ನಲ್ಲಿ ಏನೂ ಇಲ್ಲ. ನಾನು ಉಲಿಯಲಾರದ ಕೊಳಲಿನಂತೆ ನಿಷ್ಪ್ರಯೋಜಕವಾಗಿದ್ದೇನೆ. ನಾದವು ಇಲ್ಲದಂತಹ ನನ್ನ ಹಾಡಿಗೆ ಯಾರು ಒಲಿಯುವುದಿಲ್ಲ. ಯಾರು ನನ್ನ ಹಾಡನ್ನು ಕೇಳಲೂ ಸಹ ಇಷ್ಟಪಡುವುದಿಲ್ಲ. ಬೇರೆಯವರಿಗೆ ಪ್ರಯೋಜನಕ್ಕೆ ಬರದ ನಾನು ವ್ಯರ್ಥ ಬದುಕನ್ನು ನಡೆಸುತ್ತಿದ್ದೇನೆ. ನನ್ನ ಬದುಕು ಸಾರ್ಥಕವಾಗುವ ಬಗೆಯನ್ನು ತಿಳಿಸು ಎಂದು ಆ ಅನಂತಶಕ್ತಿಯಲ್ಲಿ ನಿವೇದನೆಯನ್ನು ಮಾಡಲಾಗುತ್ತಿದೆ.

ಹೇಳಿಕೊಳ್ಳಲೆನಗೆ ನನ್ನೊಳೇನಿದೆ ಹೇಳು
ದಾರಿ ಹೋಕನು ನಾನು ;
ಬರಿಯ ಕಟಾಕ್ಷದಲಿ ವಿಸಟಂಬರಿಯುವೆ
ಬೆಟ್ಟ ಬಯಲು ಕಾಮ !

ಹೇಳಿಕೊಳ್ಳಲೆನಗೆ ನನ್ನೊಳೇನಿದೆ ಹೇಳು
ಬಲವೆಲ್ಲಿದೆ ಎದುರಿಸಲು ;
ಗುರಿಗಾದ ದೂರದೂರಿನ ಗೊಡವೆಗೆ
ಛಲವೆಲ್ಲಿದೆ ಗೆಲಲ್ಲು!

ಹೇಳಿಕೊಳ್ಳಲೆನಗೆ ನನ್ನೊಳೇನಿದೆ ಹೇಳು
ಪರಿಹಾರವಾಗಿ ನಿನ್ನ ವಿನಾ :
ನೀನಿತ್ತುದರಲೆ ನುಗ್ಗು ನುರಿಯಾಗುತ
ತೃಪ್ತವಾಗಲಿ ಜೀವಕಾಮಾ!

ನಾನು ದಾರಿಹೋಕನಂತೆ ನನ್ನದು ಎಂದು ಹೇಳಿಕೊಳ್ಳಲು ಸ್ಥಿರವಾದುದ್ದು ಏನೂ ನನ್ನ ಬಳಿ ಇಲ್ಲ. ಬರಿಯ ಕಟಾಕ್ಷದಲ್ಲಿ ಬದುಕುತ್ತಿರುವವನು ನಾನು ಎನ್ನುವ ಭಾವದಿಂದ ಬದುಕುವೆ ಎನ್ನುವ ಅಂಶವನ್ನು ಇಲ್ಲಿ ಸ್ಪಷ್ಟಪಡಿಸಿದ್ದಾರೆ. ನನಗೆ ನನ್ನದೇ ಆದಂತಹ ದೃಢವಾದ ಒಲವು ಇಲ್ಲ. ಯಾವುದೋ ದೂರದ ಊರಿನ ಗೊಡವೆಯನ್ನು ಗೆಲ್ಲಿಸುವ ಛಲವು ನನ್ನಲ್ಲಿ ಇಲ್ಲ. ನನ್ನಲ್ಲಿ ಎಲ್ಲದಕ್ಕೂ ಇರುವ ಏಕೈಕ ಪರಿಹಾರವೆಂದರೇ ಅದು ಅನಂತಶಕ್ತಿಯಾದ 'ನೀನೇ'. ನಿನ್ನ ವಿನಾ ನನ್ನಲ್ಲಿ ಏನೂ ಇಲ್ಲ. ಆದ್ದರಿಂದ ಪ್ರತಿಯೊಂದಕ್ಕೂ ನಾನು ನಿನ್ನನ್ನೇ ಆಶ್ರಯಿಸಿದ್ದೇನೆ.

ಓ ಅನಂತ ಶಕ್ತಿಯೇ ನೀನು ಏನನ್ನೂ ನೀಡುವೆಯೋ ಅದರಲ್ಲಿಯೇ ನಾನು ಬದುಕುತ್ತೇನೆ. ಈ ಜೀವನದಲ್ಲಿ ಹೇಗೆ ನನ್ನದೆನ್ನುವುದು ಏನೂ ಇಲ್ಲವೋ ಹಾಗೆಯೇ ನಿನ್ನಿಂದ ಲಭಿಸಿದ್ದರಲ್ಲಿಯೇ ಸಂತೋಷದಿಂದ ತೃಪ್ತಿಯನ್ನು ಕಾಣುವೆ. ಜೀವನದಲ್ಲಿ ನೀನೆ ಎಲ್ಲ ಎನ್ನುತ್ತಾ ಬಾಳುವವನು ನಾನು ಎನ್ನುವುದನ್ನು ಇಲ್ಲಿ ಕವಿ ಸ್ಪಷ್ಟಪಡಿಸಿದ್ದಾರೆ.

**ಮೊರೆ**

ಸುತ್ತ ಪ್ರಕೃತಿಯ ತೆರ ನನ್ನ ಜೀವನ ಪ್ರಕೃತಿ ಇರಲಿ
ಪದ್ಮ ಪತ್ರದ ಜಲದಂತಿರಲಿ ಚಿತ್ತ
ವಾದ ಮಾಡದ ಬುದ್ಧಿ ವಿಚಾರಕೆಳಸುತ ಸದಾ
ಚಲಿಸಲಾತ್ಮಾಭಿಮಾನದತ್ತ
ಮುಡಿಯುತಿರಲಿ ಮನಸು ಕುಸುಮ ಕನಸುಗಳನು
ಹದಗೊಳ್ಳಲೆದೆ ಬಾನ ವಿಶಾಲಕೆ
ಹೊದ್ದದೊಲು ದುರಿತಗಳನು ಬದ್ಧನಾಗಿರಿಸು ದಯೆಗೆ
ಯಾನಗೊಳ್ಳಲಿ ದಿನವೂ ದಿವಕೆ

ಸುತ್ತ ಮುತ್ತಲಿನ ಪ್ರಕೃತಿಯು ತನ್ನಲ್ಲಿ ಆದಂತಹ ಬದಲಾವಣೆಗೆ ಒಗ್ಗಿಕೊಳ್ಳುತ್ತಾ ನಿತ್ಯ ನೂತನವಾಗಿರುತ್ತದೆ. ಹಾಗೆಯೇ ಮಾನವನ ಜೀವನವು ನಿತ್ಯನೂತನವಾಗಿರಲಿ. ಪದ್ಮಪತ್ರದ ಮೇಲಿನ ಜಲವು ಹೇಗೆ ಆ ಪತ್ರಕ್ಕೆ ಅಂಟಿಯೂ ಅಂಟದಂತೆ ಇರುವುದೋ ಹಾಗೆಯೇ ಜೀವನದಲ್ಲಿ ಮನುಷ್ಯನು ಕೇವಲ ಲೌಕಿಕ ಜಂಜಾಟಗಳಿಗೆ ಮಾತ್ರವೆ ಅಂಟಿಕೊಳ್ಳದೆ ಸಾರ್ಥಕ ಬದುಕಿನತ್ತ ತೆರಳಬೇಕು. ಪ್ರತಿಯೊಂದಕ್ಕೂ ವಾದ-ವಿವಾದವನ್ನು ನಡೆಸದೆ ಎಚ್ಚರಿಕೆಯಿಂದ ಆತ್ಮಾಭಿಮಾನದಿಂದ ಸಾಗಬೇಕು. ಮನಸ್ಸು ಸದಾ ಕುಸುಮದಂತೆ ಮೃದುವಾದ, ಆಕರ್ಷಣೀಯವಾದ, ರಮಣೀಯವಾದಂತಹ ಕನಸುಗಳನ್ನು ಕಾಣಬೇಕು. ಆಗ ಆಕಾಶದಂತೆ ವಿಶಾಲವಾದ ಆಲೋಚನೆಗಳು ಎದೆಯಂಗಳದಲ್ಲಿ ಮೂಡಿಬರಲಿ ದಯೆಯು ಸದಾ ಮನಸ್ಸಿನಲ್ಲಿ ಇರಲಿ ಎನ್ನುವ ಅಂಶಗಳನ್ನು ಇಲ್ಲಿ ಕವಿ ಹೇಳಿದ್ದಾರೆ.

ಮೊಡದೊಳಗಿನ ಮಳೆ ಉಸಿರಾಡಲೋಜೋನು ಬಗೆ
ಸತತ ಉಪಕಾರಕ್ಕೆನ್ನನೆಳಸು
ತೋಷಕ್ಕಲ್ಲದೆ ದ್ವೇಷಕ್ಕಾನು ಮಾರುಗೊಡದ ಹಾಗೆ
ದಶದಿಕ್ಕುಗಳ ಕಾಲವಿರಿಸು
ಗಿರಿಯ ಕಂದರದಿ ಹರಿವ ನಿರ್ಝರದ ಸಲಿಲದಂತೆ
ತೋಯಲಿ ಆರ್ದ್ರತೆಯಲಂಕತಃಕರಣ
ಅನ್ಯರ ನೋವಿಗಾನು ಅನನ್ಯನಾಗುಳಿಯುವ ರೀತಿ
ನೀಗಲಿ ಅಲ್ಪತನವನನುಕ್ಷಣ

ಮೋಡದಿಂದ ಸುರಿಯುವ ಮಳೆಯಂತೆ ಸದಾ ಉಪಕಾರಭಾವದಿಂದ ಬದುಕುವ ಹಾಗೆ ಮಾಡು. ಸಂತೋಷವನ್ನು ಮಾತ್ರವೆ ನೀಡುತ್ತಾ ದ್ವೇಷವನ್ನು ಮಾಡದ ಹಾಗೆ ದಶದಿಕ್ಕುಗಳಿಂದಲೂ ಕಾವಲನ್ನು ಇರಿಸು ಗಿರಿಯ ಕಂದರದಿಂದ ಹರಿಯುವ ನೀರಿನ ಧಾರೆಯಂತೆ ಅದರ ಆರ್ದ್ರತೆಯಂತೆ ನಮ್ಮ ಬದುಕು ಇರುವಂತೆ ಮಾಡು ಅನ್ಯರ (ಬೇರೆಯವರ) ನೋವಿಗೆ ನಲಿವಿಗೆ ಸ್ಪಂದಿಸುವ ಅಂತಃಕರಣವನ್ನು ನೀಡು ಜನರಿಂದ ಬೇರೆಯಾಗಿ ಬದುಕುವ ಅಲ್ಪತನವನ್ನು ನೀಡಬೇಡ ಎಂದು ಆ ಆಧ್ಯಾತ್ಮನಲ್ಲಿ ಮೊರೆ ಇಡುವ ಅಂಶಗಳು ಇಲ್ಲಿ ಕಾಣಸಿಗುವುದು.

ಕೇಗಿ ಕೋಗಿಲೆಗಲೆದುರು ಕಣ್ಣ ಕಿವಿಗಳನಿರಿಸಿ
ಮೆಲ್ಲುತಿರಲಾತ್ಮ ಆಧ್ಯಾತ್ಮವನು
ರುಚಿಯಿರದ ಬಣ್ಣವಿರದ ನೀರಿನೊಲು ನಿಲಿಸಿ
ಪೂರ್ಣಗೊಳ್ಳಲಿ ಜೀವ ತಾನು!

ಕೇಗಿ, ಕೋಗಿಲೆಯಂತಹ ಪಕ್ಷಿಗಳ ಕಲರವದಲ್ಲಿಯೂ ಆಧ್ಯಾತ್ಮದ ಇಂಪು, ಗಾನವು ಕಿವಿಗಳಿಗೆ ತಲುಪುತಿರಲಿ, ರುಚಿ, ಬಣ್ಣವಿರದ ನೀರಿನಲಿ ಆತ್ಮವು ಬೆರೆತು ತನ್ನ ಜೀವನವನ್ನು ಪರಿಪೂರ್ಣತೆಯತ್ತ ಸಾಗಿಸುವಂತೆ ಮಡಲಿ ಎನ್ನುವ ಅಭಿಪ್ರಾಯವನ್ನು ಕವಿ ಇಲ್ಲಿ ವ್ಯಕ್ತಪಡಿಸಿದ್ದಾರೆ.

**ಮುಳುಗು ಮನವೆ**

ಮಾನವನು ಮನಸ್ಸು ಮಾಡಿದರೆ ಅನೇಕ ಅಸಾಧ್ಯಗಳನ್ನು ಸಾಧಿಸಬಹುದಾಗಿದೆ. ಅಂತಹ ಮಾನವನು ಹೇಗೆ ತನ್ನನ್ನು ತಾನು ಅರಿಯಲು ಪ್ರಯತ್ನಿಸಬೇಕು ಎನ್ನುವುದರ ಬಗ್ಗೆ ಈ ಕವನದಲ್ಲಿ ಪ್ರಸ್ತಾಪಿಸಬಹುದಾಗಿದೆ. ಮಾನವ ತನ್ನ ಮನಸ್ಸನ್ನು ಹೊಕ್ಕಿ ನೋಡಿದರೆ ಸತ್ಯದರ್ಶನವು ಆಗುವುದು. ಅದರ ಅಗಾಧತೆಯ ಅರಿವು ತನಗೆ ಆಗುವುದು ಎಂಬುದನ್ನು ಕುರಿತು ಕವಿಯು ಇಲ್ಲಿ ಹೇಳಿದ್ದಾರೆ.

ಮುಳುಗು ಮನವೆ ಮುಳುಗು ಮನವೆ
ಕಡಲ ಆಳಕೆ
ರತ್ನಸಿರಿಯ ಹುಡುಕಿ ತರಲು
ಮುಳುಗು ಆಳಕೆ

ಇಲ್ಲಿ ಮನಸ್ಸನ್ನು ಕುರಿತು ಮುಳುಗು ಅಂದರೆ ಹುಡುಕು ನಿನ್ನನ್ನು ನೀನು ಅರಿಯಲು, ಹುಡುಕು ನೀನು ತಿಳಿದು ಕೊಂಡಿರುವುದಕ್ಕಿಂತ ಹೆಚ್ಚಿನದು ಮತ್ತೇನೂ ಇದೆ. ಆ ಸತ್ಯದ ದರ್ಶನವಾಗಬೇಕಾದರೆ ನೀನು ಅತಿ ಹೆಚ್ಚಿನ ಶೋಧನೆಯನ್ನು ಮಾಡಬೇಕು. ಕಡಲಿನ ಆಳಕ್ಕೆ ಹೋಗಿ ಹುಡುಕಿದಂತೆಲ್ಲ ಅಪೂರ್ವವಾದ ರತ್ನಗಲು, ಅಪರೂಪದ

ವಸ್ತುಗಳು ಹೇಗೆ ದೊರಕುತ್ತವೋ ಆಗೆ ನೀನು ಅಂತರಂಗ ಶೋಧನೆ ಮಾಡಿಕೊಳ್ಳುವುದರಿಂದ ನಿನಗೆ ಹೆಚ್ಚಿನ ಜ್ಞಾನವು ಸಿಗುತ್ತದೆ ಎನ್ನುವುದನ್ನು ಕುರಿತು ಇಲ್ಲಿ ಕವಿ ಹೇಳುವರು.

ದೇಹಗಣಿಯು ಆತ್ಮಮಣಿಯು
ನಿತ್ಯ ನೂತನ
ಅದುವೆ ಗುರು ತಮೋ ಹಾರಿ
ದಿವ್ಯ ಚೇತನ

ಮಾನವ ದೇಹವೆಂಬ ಗಣಿಯಲ್ಲಿ ಪ್ರಕಾಶಿಸುವ ಆತ್ಮವೆಂಬ ಮಣಿಯು ಅಡಗಿದೆ. ಅದನ್ನು ಹೊರತೆಗೆದಾಗ ಆತ್ಮ ಪ್ರಕಾಶವು ಗೋಚಿಸುವುದು ಆಗ ಅಜ್ಞಾನದ ಕತ್ತಲೆಯು ಹರಿದು ಜ್ಞಾನದ ಕಣ್ಣುಗಳು ತೆರೆಯುತ್ತವೆ. ಜಗತ್ತು ಮೊದಲಿನ ನೋಟದಲ್ಲಿ ಗೋಚರಿಸಿದಕ್ಕಿಂತ ಭಿನ್ನವಾಗಿ ಗೋಚರಿಸುತ್ತದೆ. ಈ ಆತ್ಮವೆಂಬ ದಿವ್ಯಮಣಿಯು ನಿತ್ಯ ನೂತನವಾದದ್ದು. ಅದು ಹುಟ್ಟು-ಸಾವುಗಳಿಂದ ಮುಕ್ತವಾದದ್ದು. ಆ ಆತ್ಮನು ನೀಡುವ ಅರಿವು ಗುರುವಿನ ಹಾಗೆ ನಿನಗೆ ದಾರಿತೋರಿಸುವುದು ನಿನ್ನಲ್ಲಿ ಹುದುಗಿರುವ ಕತ್ತಲನ್ನು ನಿವಾರಿಸಿ ನಿನಗೆ ಬೆಳಕಿನ ದಾರಿಯನು ತೋರಿಸುವುದು. ಆ ಅರಿವಿನ ದಿವ್ಯಚೇತನವು ನಿನ್ನಲ್ಲಿ ಹೊಸ ಚೈತನ್ಯವನ್ನು ಉಂಟುಮಾಡುವುದು ಆದ್ದರಿಂದ ಮನಸ್ಸೆಂಬ ಕೆಡಲ ಆಳಕೆ ಮುಳುಗಿ ಶೋಧಿಸಬೇಕು ಎನ್ನುವ ಮಾತುಗಳನ್ನು ಇಲ್ಲಿ ಹೇಳಲಾಗಿದೆ.

ಕರೆವ ಕಲ್ಪತರುವು, ಅದುವೆ
ಬಯಕೆ ಜೇನು
ಸಕಲ ಇಷ್ಟ, ಸಿರಿಯ ಕೊಡುವ
ಕಾಮಧೇನು

ಅರಿವೆಂಬುದು ದೊರೆತಾಗ ಅದು ಮಾನವನಿಗೆ ಎಲ್ಲಾ ಬಯಕೆಗಳನ್ನು ಈಡೇರಿಸುವ ಕಲ್ಪತರುವಿನಂತೆ ಜೊತೆಯಾಗಿರುತ್ತದೆ. ಯಾವುದೇ ಸಂದರ್ಭದಲ್ಲಿಯೂ ಭಯಪಡದೆ ನಮ್ಮ ಎಲ್ಲ ಬಯಕೆಗಳನ್ನು ಈಡೇರಿಸಿಕೊಳ್ಳುವ ನಿಟ್ಟಿನಲ್ಲಿ ಅಮೃತದಂತೆ ಕೆಲಸ ಮಾಡುತ್ತದೆ. ಮಾನವನ ಮನಸ್ಸಿಗೆ ಅರಿವುದೊರೆತಾಗ ಅದು ಸ್ವರ್ಗ ಲೋಕದಲ್ಲಿನ ಕಾಮಧೇನುವಿನಂತೆ ಆಸೆರೆಯಾಗುವುದು. ಮನಸ್ಸಿನ ಬೇಡಿಕೆಗೆ ತಕ್ಕಂತೆ ಸ್ಪಂದಿಸಿ ಅರಿವಿನ ಮಾರ್ಗವನ್ನು ತೋರಿಸುತ್ತಾ ನಡೆಸುವುದು. ಆದ್ದರಿಂದ ಮನಸ್ಸಿನ ಒಳ ಹೊಕ್ಕು ನೋಡುವುದು ಅವಶ್ಯವೆನ್ನುತ್ತಾರೆ.

ಎದೆಯ ಕದವ ತೆರೆದು ನೀನು
ಹುಡುಕಿ ನೋಡು
ನಿನಗೆ ಎಲ್ಲ ದೊರಕಲಹುದು
ಒಳಗೆ ನೋಡು

ಮಾನವನ ಮನಸ್ಸಿನ ಎದೆಯ ಮುಚ್ಚಿದ ಕದವನ್ನು (ಬಾಗಿಲನ್ನು) ತೆರೆದು ನೋಡಿದಾಗ ಅರಿವಿನ ದಿವ್ಯ ಸಂದೇಶವು ದೊರಕುವುದು. ಮನಸ್ಸಿಗೆ ಅನೇಕ ಬಗೆಯ ಪರದೆಗಳು ಆವರಿಸಿ ಅವು ಮನಸ್ಸನ್ನು ಮಲಿನಗೊಳಿಸುತ್ತವೆ. ಮನಸ್ಸಿನ ಬಾಗಿಲನ್ನು ಮುಚ್ಚಿ ಬಿಡುತ್ತವೆ. ಆದ್ದರಿಂದ ಆವರಿಸಿದ ಕತ್ತಲೆಯನ್ನು, ಸಂಕೋಲೆಗಳನ್ನು ಸರಿಸಿ ನೋಡಿದಾಗ ಮಾನವನಿಗೆ ನಿಜವಾಗಿಯೂ ಬೇಕಾದುದು ಏನು ಅದು ಅಲ್ಲಿ ಸಿಗುವುದು ಆದ್ದರಿಂದ ಒಮ್ಮೆ ನಿನ್ನ ಮನಸ್ಸಿನ ಬಾಗಿಲನ್ನು ತೆರೆದು ನೋಡು ಎನ್ನುವ ಮಾತುಗಳನ್ನು ಇಲ್ಲಿ ಕವಿ ಹೇಳಿದ್ದಾರೆ.

ಒಡಲ ಕಡಲ ರತ್ನ ಖನಿಯ
ನಿಜನಿವಾಸಕೆ
ಮುತ್ತನಾಯ್ದು ತರಲು, ಮನವೆ
ಮುಳುಗು ಆಳಕೆ

ಮಾನವನ ಒಡಲು (ಶರೀರ) ಎಂಬ ಕಡಲಿನ ರತ್ನ ಖಚಿತವಾದ ಖಜಾನೆಯದ ಮನಸ್ಸಿನ ಒಳಹೊಕ್ಕು ನೋಡು, ಅದರಲ್ಲಿ ನಿಷ್ಕಲ್ಮಶ, ಪ್ರೀತಿ, ಮಾಧುರ್ಯ, ಕರುಣೆ, ದಯೆ, ಸಾಮರಸ್ಯ, ಸತ್ವಿಕತೆ, ಸತ್ಯ, ತ್ಯಾಗ, ಧರ್ಮ, ವಾತ್ಸಲ್ಯ, ನಿರ್ಮೋಹ, ಕ್ಷಮೆ ಮುಂತಾದ ಅದ್ಬುತವಾದ ಮುತ್ತುಗಳನ್ನು ಹೊರಗೆ ತಗೆದು ಕೊಂಡು ಬಾ. ಮಾನವ ಅವುಗಳನ್ನು ತಂದು ನಿನ್ನಲ್ಲಿ ಅಳವಡಿಸಿಕೋ. ಅನ್ಯರಿಗೂ ಹಂಚು ಆದ್ದರಿಂದ ಮಾನವನಲ್ಲಿ ಮಾನವತ್ವ ಮೆರೆಯುವುದು. ಸಾಮರಸ್ಯ ಉಳಿಯುವುದು.

ಒಟ್ಟಿನಲ್ಲಿ ಮಾನವ ತನ್ನ ಮನಸ್ಸಿನ ಆಳವನ್ನು ಹೊಕ್ಕಿ ನೋಡಿದರೆ ಅಪೂರ್ವವಾದ ಶಾಶ್ವತ ಸಂಪತ್ತು ಸಿಗುವುದು. ಅದು ಮಾನವನ ಜೀವನಕ್ಕೆ ಅತಿ ಅಗತ್ಯವಾದುದ್ದು ಎನ್ನುವ ಅಭಿಪ್ರಾಯವನ್ನು ಇಲ್ಲಿ ಕವಿ ವ್ಯಕ್ತಪಡಿಸಿದ್ದಾರೆ.

**ಏಕಿಂತು ತುಡಿಯುತಿರುವೆ ಓ ನನ್ನ ಜೀವ**

ಏಕಿಂತು ತುಡಿಯುತಿರುವೆ ಓ ನನ್ನ ಜೀವ
ಬೇಕಾದುದೆ ನಿನಗಿರಲು ಏನಿಂತು ಭಾವ!

ಮಾನವನ ಮನಸ್ಸು ಪ್ರತಿಕ್ಷಣವು ಪ್ರಶಾಂತವಾಗಿ ಇರುವುದಿಲ್ಲ. ಕೆಲವೊಮ್ಮೆ ಏನೋ ತಳಮಳವನ್ನು ಅನುಭವಿಸುತ್ತಿರುತ್ತದೆ. ಮಾನವನ ಮನಸ್ಸು ಸಾಮಾನ್ಯವಾಗಿ ಯಾವಾಗಲೂ ಆಸೆಯ ಬೆನ್ನಹತ್ತುತ್ತಿರುತ್ತದೆ. ಕನಿಷ್ಠ ಅಗತ್ಯತೆಗಳ ಪೂರೈಕೆಗಾಗಿ ಮೊದಲು ಹವಣಿಸುತ್ತಿರುತ್ತದೆ. ಆ ಅವಶ್ಯಕತೆಗಳು ತೀರಿದ ನಂತರ ಗರಿಷ್ಠ ಅವಶ್ಯಕತೆಗಳತ್ತ ಮನುಸ್ಸು ವಾಲುತ್ತದೆ. ಅವುಗಳನ್ನು ಪಡೆಯಲು ತವಕಿಸುತ್ತಿರುತ್ತದೆ. ಆದ್ದರಿಂದ ಮಾನವನ ಬಾಳಿಗೆ ಬೇಕಾದಂತಹ ಅವಶ್ಯಕತೆಗಳು ಈಡೇರಿದ ನಂತರ ಮಾನವನ ಮನಸ್ಸು ಶಾಂತವಾಗಿರಬೇಕು. ಆದರೆ ಈ ತವಕವು ಎಂದುಕು ಉಂಟಾಗುವುದು ಎನ್ನುವ ಭಾವವಿಲ್ಲಿ ವ್ಯಕ್ತವಾಗಿದೆ.

ಯಾವ ಧ್ವನಿವರ್ಧಕ ಸೆರೆಹಿಡಿದಿಹುದು ನಿನ್ನ
ಯಾವ ಮಿಂಚಿನ ಬಳ್ಳಿ ಸುತ್ತಿಹುದು ನಿನ್ನ!
ಯಾರ ಬೆಳಕಿನ ಕೈಯ್ಯ ಕರೆಗೋತಿರುವೆ ಜೀವ
ಯಾರ ಅಗ್ನಿಸ್ಪರ್ಶಕೆ ಸೋತಿರುವೆ ಮೇಣೆನ್ನ ಭಾವ!
ಏಕಿಂತು ನೋಡುತಿರುವೆ, ಯಾರನ್ನು ಬೇಡುತಿರುವೆ
ಏನೆಲ್ಲ ಬಯಸಿ ದಾರಿಯನೆ ಹುಡುಕುತಿರುವೆ! (ಏಕಿಂತು)

ಇಲ್ಲಿನ ಸಾಲುಗಳಲ್ಲಿ ಮನಸ್ಸಿನ ಪ್ರಶಾಂತತೆಯು ಕಡಿಮೆಯಾಗಿ ತುಡಿತವು ಹೆಚ್ಚಾಗಿರುವುದು ಕಂಡು ಬರುತ್ತಿದೆ. ಮನಸ್ಸನ್ನು ಯಾವ ಶಬ್ದವು ಸೆರೆಹಿಡಿಇದೆ. ಯಾವ ಮಿಂಚಿನಬಳ್ಳಿ ಆವರಿಸಿದೆ. ಯಾರಿಂದ ಹೊರಟ ಬೆಳಕನ್ನು ಎದುರುನೋಡುತ್ತಿರುವುದೋ, ಯಾರ ಅಗ್ನಿಸ್ಪರ್ಶಕ್ಕೆ ಸೋತಿದೆ ಹೇಳು ಎನ್ನುತ ಮನಸ್ಸನ್ನು ಪ್ರಶ್ನಿಸುವ ಭಾವವು ವ್ಯಕ್ತವಾಗಿದೆ. ಮನಸ್ಸು ಯಾರಿಗೆ ಕಾಯುತ್ತಿದೆ. ಯಾರ ಸಾಮಿಪ್ಯವನ್ನು ಬೇಡುತ್ತಿದೆ ಏನನ್ನು ಬಯಸಿ ಕಾತರಿಸುತ್ತಿದೆ ಎನ್ನುವ ಪ್ರಶ್ನೆಗಳು ಮೂಡಿವೆ. ಇಲ್ಲಿ ಮನಸ್ಸಿನ ತುಡಿತಕ್ಕೆ ಕಾರಣಗಳನ್ನು ಹುಡುಕುವ ಪ್ರಯತ್ನ ನಡೆದಿದೆ ಎನ್ನಬಹುದು.

ಯಾವ ದಿವ್ಯಾಮೃತಕೆ ಚಾಚಿರುವುದು ನಿನ್ನ ಕೈ
ಯಾವ ಕಲ್ಪನೆಯ ತಬ್ಬುತಿರುವುದು ನಿನ್ನ ಮೈ!
ಲೌಕಿಕದ ಜಂಜಡದಿ ಗುಡಿಕಟ್ಟಿರುವುದು ಭ್ರಾಂತಿ
ನಿನಗಲ್ಲಿ ದೊರಕಲಿಲ್ಲವೆ ಚಿರಸೌಮ್ಯ ಶಾಂತಿ!
ಎದೆಯರಮನೆಯಲ್ಲಿ ಏನೇನ ಹುಡುಕುತಿರುವೆ
ಮತ್ತೇನೆ ಬಯಸಿ ಮುಂದೆಲ್ಲಿ ಹೋಗುತಿರುವೆ !

ಮನಸ್ಸು ಯಾವ ದಿವ್ಯವಾದ ಅಮೃತನ್ನ ಬಯಸಿ ತಪಿಸುತ್ತಿರುವುದೋ, ಯಾವುದರ ಕಲ್ಪನೆಯು ಮಾನವನ ದೇಹವನ್ನು ಆವರಿಸಿದೆಯ, ಯಾವುದರ ಭ್ರಮೆಯಲ್ಲಿ, ಯಾವುದರ ಕನವರಿಕೆಯಲ್ಲಿ ಮಾನವನ ಮನಸ್ಸು ಲೀನವಾಗಿದೆಯೋ ಎಂಬುದನ್ನು ಅರಿಯಲು ಸಾಧ್ಯವಾಗುತ್ತಿಲ್ಲವೆಂದು ಕವಿಯು ಇಲ್ಲಿ ಹೇಳಿದ್ದಾರೆ. ನಂತರದ ಕೆಲಸಾಲುಗಳಲ್ಲಿ ಲೋಕದ ಜಂಜಾಟಗಳಿಂದ, ತೊಂದರೆಗಳಿಂದ ಯಾವುದೋ ಭ್ರಮೆ ನಿನ್ನನ್ನು ಆವರಿಸಿದೆ. ಓ ಮನವೇ ನಿನಗೆ ಆ ಜಂಜಾಟಗಳ ಬಂಧನದಲ್ಲಿ ಪ್ರಶಾಂತತೆ, ಶಾಂತಿ, ಆನಂದ ದೊರೆಯಲಿಲ್ಲವೇ. ಆದ್ದರಿಂದ ಈ ಪರಿತಾಪಕ್ಕೆ ಒಳಗಾಗಿರುವೆಯ ಎಂದು ಮನಸ್ಸನ್ನು ಪ್ರಶ್ನಿಸಿದ್ದಾರೆ. ಕವಿ ಈ

ನಂತರ ಮುಂದುವರೆದು ನಿನ್ನ ಎದೆಯ ಅರಮನೆಯಲ್ಲಿ ಏನನ್ನು ಹುಡುಕುತ್ತಾ ಅಲೆಯುತ್ತಿರುವೆ, ನಿನಗೆ ಏನು ಬೇಕು ಅದು ದೊರೆಯತೆ, ಅದು ದೊರೆಯದೆ ಮತ್ತೆ ಏನನ್ನು ಬಯಸಿ ಎಲ್ಲಿ ಪಯಣವನ್ನು ಸಾಗಿಸುತ್ತಿರುವೆ ಎನ್ನುವಂತಹ ಮಾತುಗಳನ್ನು ಕವಿ ಇಲ್ಲಿ ಮನಸ್ಸನ್ನು ಕುರಿತು ಹೇಳಿದ್ದಾರೆ.

ಈ ಸಾಲುಗಳು ಓದುಗನನ್ನು ತನ್ನ ಮನಸ್ಸನ್ನು ತಾನೇ ಪ್ರಶ್ನಿಸಿಕೊಳ್ಳುವಂತೆ ಮಾಡುತ್ತವೆ. ಓದುಗನ ಮನಸ್ಸು ಈ ಸಾಲುಗಳಿಂದ ಚಿಂತನ ಲಹರಿಯತ್ತ ಹರಿಯುತ್ತಾ ಹೋಗುವುದು. ಈ ಸಾಲುಗಳು ಕೇವಲ ಕವಿಯೊಬ್ಬರಿಂದ ಮೂಡಿ ಬಂದ ಸಾಲುಗಳು ಮಾತ್ರವಲ್ಲ ಬದಲಿಗೆ ಅನೇಕ ಮಾನವರ ಮನಸ್ಸಿನ ಭಾವಗಳು ಎನ್ನಬಹುದು.

ಆತಂಕ, ಉದ್ವೇಗ, ನಿರಾಸೆ, ಉತ್ಸಾಹ, ಸಂತೋಷ, ದುಃಖ, ಸಂಭ್ರಮ, ಮುಂತಾದ ಭಾವನೆಗಳನ್ನು ಮಾನವರ ಮನಸ್ಸು ಅನುಭವಿಸುತ್ತಿರುತ್ತದೆ.

ಈ ಸೂಕ್ಷ್ಮ ಸಂವೇದನೆಗಳು ಮಾನವನನ್ನು ಭ್ರಮಾ ಲೋಕದಲ್ಲಿ ತೇಲುವಂತೆಯೂ ಮಾಡುತ್ತವೆ. ಆತ್ಮ ಸಂಯಮವನ್ನು ಆತ್ಮ ವಿಶ್ವಾಸವನ್ನು ಕಳೆದುಕೊಳ್ಳುವಂತೆಯೂ ಮಾಡಿ ಅನೇಕ ಸಂದರ್ಭಗಳಲ್ಲಿ ಊಹಿಸದ ಘಟನೆಗಳಿಗೂ ಕಾಣವಾಗುವಂತೆ ಮಾಡುತ್ತವೆ.

ಬಡವ, ಶ್ರೀಮಂತ, ಹೆಣ್ಣು, ಗಂಡು, ಮುಂತಾದ ಭೇದವಿಲ್ಲದೆ ಎಲ್ಲಾ ಮಾನವರಲ್ಲಿಯೂ ಮನಸ್ಸಿನ ಈ ಭಾವನೆಗಳು ಒಂದಲ್ಲ ಒಂದು ರೂಪದಲ್ಲಿ ಆತಂಕ, ತೊಂದರೆಯನ್ನು ಉಂಟುಮಾಡುತ್ತವೆ.

ಸೂಕ್ಷ್ಮ ಮನಸ್ಥಿತಿಯವರಲ್ಲಿಯಂತೂ ತುಂಬಾ ಹೆಚ್ಚಿನ ಪರಿಣಾಮವನ್ನು ಉಂಟುಮಾಡುತ್ತವೆ. ಮಾನಸಿಕ ಅಸ್ವಸ್ಥತೆಯತ್ತಲೂ ಕರೆದೊಯ್ಯಬಹುದು. ಆದ್ದರಿಂದ ಮಾನವರು ಮನಸ್ಸಿನ ಭಾವನೆಗಳನ್ನು ಹಿಡಿತದಲ್ಲಿ ಇಟ್ಟುಕೊಳ್ಳಬೇಕು.

ಒಟ್ಟಿನಲ್ಲಿ ಇಲ್ಲಿ ಕವಿಯು ಮನಸ್ಸಿನ ತುಡಿತವನ್ನು ಅದ್ಭುತವಾದ ಸಾಲುಗಳಲ್ಲಿ ವಿವರಿಸಿದ್ದಾರೆ. ಆದ್ದರಿಂದ ಓದುಗನಿಗೆ ನೈಜವಾದ ಅನುಭೂತಿ ದೊರೆಯುವುದನ್ನು ಕಾಣಬಹುದು.

**ನಾನೇನನ್ನೂ ಮಾಡಲಿಲ್ಲ !**

ನಾನೇನನ್ನೂ ಮಾಡಲಿಲ್ಲ
ಲೋಕಕ್ಕಾಗಿ ;
ಭವದ ಕಡಲಲ್ಲಿ ಮುಳುಗಿ ತೇಲುತಿರುವೆ
ಕರಗಿ ನೀರಾಗಿ !
ಕಡೆದು ಮೂಡುತಿವೆ ನೂರಾರು ಪ್ರಶ್ನೆಗಳ ಸಾಗರ
ಕೊಡಲುಂಟೆ ಇದದೆ ಉತ್ತರ ?!
ನಡುಗುತಿದೆ ಚಿತ್ತ, ಕುಸಿಯುತಿದೆ ಬಾಳು
ಓ! ತಂದೆ ಇದ ಸರಿಮಾಡಲೇಳು !
ಹರಿದು ನಿನ್ನ ಕರುಣೆ ಹಾಲಕಡಲು
ಆಗಲಯ್ಯ ಇದುವೆ ಮತ್ತೆ ಮಾಮೂಲು
ಹೊಸಮಾಲು !
ಕಟ್ಟುತಿಹ ವ್ಯೂಹ, ಸಂಸಾರ ಭ್ರಮಣೆ!
ತತ್ತರಿಸುತಿದೆ ಜೀವ, ಗುರಿಯೊಂದ ಕಾಣೆ !
ನನ್ನಾಣೆ.

ನಾನೇನನ್ನು ಮಾಡಲಿಲ್ಲ ಎಂಬ ಶೀರ್ಷಿಕಾ ಪದ್ಯವನ್ನು ಗಮನಿಸಿದಾಗ ಲೋಕದಲ್ಲಿ ಹುಟ್ಟಿದ ನಾವು ಲೋಕಕ್ಕೆ ಏನನ್ನಾದರೂ ಮಾಡಬೇಕು. ಆದರೆ ಏನನ್ನು ಮಾಡಲು ಆಗಲಿಲ್ಲ. ಭವದ ಕಷ್ಟಸುಖದಲ್ಲಿ ಸಿಲುಕಿಕೊಂಡು ಅವುಗಳಿಂದ ಹೊರಬರಲು ಆಗದೆ ಮುಳುಗಿ ತೇಲುವ ಪರಿಸ್ಥಿತಿಯಲ್ಲಿದ್ದೇನೆ ಎನ್ನುವಂತಹ ಅಸಹಾಯಕ ಪರಿಸ್ಥಿತಿ ಚಿತ್ರಣವಿಲ್ಲಿದೆ.

ಈ ಕವನದಲ್ಲಿ ಕವಿಯು ಸಮಾಜಕ್ಕಾಗಿ ತನಗಾಗಿ ಮರಗುತ್ತಾರೆ. ತಾನು ಸಮಾಜದಿಂದ ಎಲ್ಲವನ್ನು ನಿರೀಕ್ಷಿಸುತ್ತಿದ್ದೇನೆ. ಆದರೆ ತಾನು ಸಮಾಜಕ್ಕೆ ಏನನ್ನು ನೀಡಿದ್ದೇನೆ ಎಂಬ ಭಾವನೆ, ತೋಳಲಾಟವನ್ನು ಇಲ್ಲಿ ಕಾಣಬಹುದು.

ತನ್ನ ಆತ್ಮನಿವೇದನೆ ಮಾಡಿಕೊಳ್ಳುತ್ತಾ, ಭಗವಂತನನ್ನು ಆಧ್ಯಾತ್ಮಿಕ ಅಲೌಕಿಕ ಶಕ್ತಿಯನ್ನು ಕುರಿತು ತನ್ನಲ್ಲಿರುವ ಬಯಕೆ ಲೆಕ್ಕವಿಲ್ಲದಂತೆ ಸುಳಿದಾಡುವ ಪ್ರಶ್ನೆಗಳಿಗೆ ಕುಸಿದಂತೆ ಆಗುತ್ತಿರುವ ಅನುಭವಕ್ಕೆ ಭಗವಂತನ ಆಸರೆಯನ್ನು ಕೋರಿದ್ದಾರೆ. ನಿನ್ನ ಕರುಣೆಯ ಹಾಲು ಕಡಲಿನಿಂದ ಹೊಸತನವನ್ನು ನೀಡು. ನನ್ನಲ್ಲಿ ಹೊಸಚೈತನ್ಯವನ್ನುಂಟುಮಾಡು ಎಂಬ ನಿವೇದನಾ ಭಾವವನ್ನು ಕಾಣಬಹುದು. ಸಂಸಾರ, ಬದುಕಿನ ಜಂಜಾಟಗಳಿಂದ ನಲುಗಿರುವ ನನ್ನ ಮನಕೆ ಅಪೂರ್ವವಾದ ಪ್ರಶಾಂತ ಅನುಭೂತಿಯನ್ನು ಕರುಣಿಸು ಗುರಿಯತ್ತ ನನ್ನನ್ನು ಸಮರ್ಥವಾಗಿ ನಡೆಸು ಎನ್ನುವ ಅಭಿವ್ಯಕ್ತಿಯನ್ನು ಕಾಣಬಹುದು.

ನಾನೊಂದು ಚೆಂಡು, ಎಸೆದಂತೆ ಸಿಪ್ಪೆ
ಮನಗೋಳದಲ್ಲಿ ಓಕುಳಿಯಾಡುತ್ತಿದೆ ಭಾವವಗಳ ಕಪ್ಪೆ!
ದೋಷರೂಪದ ತವರು ಈ ನನ್ನ ಹೃದಯ
ಎದೆಬಾನಿಗೆ ಬರಲು ನಿನ್ನ ಸೂರ್ಯಕಿರಣ ಉದಯ

ಎಂಬ ಸಾಲುಗಳನ್ನು ಗಮನಿಸಿದಾಗ

ಕಾಲಲಿ ಕಟ್ಟಿದ ಗುಂಡು, ಕೊರಳಲಿ ಕಟ್ಟಿದ ಚೆಂಡು
ತೇಲಲಿಯದು ಗುಂಡು, ಮುಳುಗಲಿಯದು ಚೆಂಡು
ಇಂತಪ್ಪ ಸಂಸಾರ ಶರಧಿಯ ದಾಂಟಿಸಿ
ಕಾಲಾಂತಕನೇ ಕಾಯೋ, ಕೂಡಲಸಂಗಯ್ಯ

ಎನ್ನುವ ಬಸವಣ್ಣನವರ ವಚನವು ನೆನಪಾಗುವುದು. ಇಲ್ಲಿ ಅಣ್ಣನವರು ಸಂಸಾರದಲ್ಲಿ ಹೇಗೆ ನಾವು ಸಿಕ್ಕಿಕೊಂಡು ಹೊರಬರಲಾಗದೆ ಬಂಧಿಸಲ್ಪಡುತ್ತೇವೆ ಎಂಬುದನ್ನು ಸೊಗಸಾಗಿ ತಿಳಿಸಿದ್ದಾರೆ. ಹಾಗೆ ಆಧ್ಯಾತ್ಮದ ಅರಿವನ್ನು ಹೊಂದಲು ದೈವದ ಬೆಂಬಲ ಬೇಕಿದೆ ಎನ್ನುವುದನ್ನು ಅದ್ಭುತವಾಗಿ ಚಿತ್ರಿಸಿದ್ದಾರೆ. ಅದೇ ರೀತಿ ರಾಗೌ ಅವರ ಮೇಲೆ ಬಸವಣ್ಣನವರ ಪ್ರಭಾವವನ್ನು ಇಲ್ಲಿ ಗಮನಿಸಬಹುದು.

ಸಮಾಜಕ್ಕೂ ಏನನ್ನು ಮಾಡಲಾಗಲಿಲ್ಲ. ಆಧ್ಯಾತ್ಮದ ಅನುಬಂಧವನ್ನು, ಅನುಸಂಧಾನವನ್ನು ಹೊಂದಲಾಗಲಿಲ್ಲ, ಬದಲಿಗೆ ಸಂಸಾರದ ಭವದ ಜಂಜಾಟಗಳಲ್ಲಿ ಸಿಕ್ಕಿಕೊಂಡು ನರಳುತ್ತಿದ್ದೇವೆ. ನನ್ನ ಮನಸ್ಸು ಲಗಾಮಿಲ್ಲದ ತುರುಗದಂತೆ ಎತ್ತಲೋ

ಗುರಿತಪ್ಪಿ ಓಡುತ್ತಿದೆ. ಅದನ್ನು ಸರಿಯಾದ ದಾರಿಯಲ್ಲಿ ತರಲು ನನ್ನಿಂದ ಆಗುತ್ತಿಲ್ಲ. ಮನದಲ್ಲಿ ಚಿಂತೆಯ ಅತೃಪ್ತ ಭಾವವನ್ನು ಉಂಟುಮಾಡುತ್ತಿದೆ ಎನ್ನುವಂತಹ ಮಾನಸಿಕ ತುಮುಲವನ್ನು ಕೆಲವು ಸಾಲುಗಳಲ್ಲಿ ಗಮನಿಸಬಹುದು.

ಆತ್ಮವು ಭವದಲ್ಲಿ ಸಿಕ್ಕಿಕೊಂಡು ಭತವಂತನ ಸಹಾಯವನ್ನು ಬೇಡುವುದನ್ನು ಇನ್ನೂ ಕೆಲವು ಸಾಲುಗಳಲ್ಲಿ ಗಮನಿಸಬಹುದು. ಮಾನವನು ಮಾಯೆ, ಮಮಕಾರವೆಂಬ ಕಳೆಯನ್ನು ನಿರ್ಮೂಲನಾ ಮಾಡಿ ಆತ್ಮನೋತ್ತಿಯನ್ನು ಹೊಂದಲು ಆಗಲಿಲ್ಲ ಎಂಬ ವಿಷಾದ ಭಾವವನ್ನು ಇಲ್ಲಿ ಗುರುತಿಸಬಹುದು.

ಜೀವನದಲ್ಲಿ ಬರಿ ಚಿಂತೆ, ನೋವು, ನಲಿವುಗಳಿಗೆ ಮಾತ್ರವೇ ಸ್ಥಾನವನ್ನು ನೀಡಿದ್ದೇವೆಯೇ ಹೊರತು ಜ್ಞಾನವೆಂಬ ಹಗ್ಗದಿಂದ ಚಂಚಲ ಮನಸ್ಸೆಂಬ ಕುದುರೆಯನ್ನು ಕಟ್ಟಿಹಾಕಿ ಜೀವಿತದ ನಿಜವಾದ ಗಮ್ಯವನ್ನು ಮುಟ್ಟಲು ಸಾಧ್ಯವಾಗಲಿಲ್ಲ ಎಂಬ ಹತಾಶೆಯನ್ನು ಕೂಡ ಗುರುತಿಸಬಹುದು. ಮತ್ತೊಂದು ಕಡೆ

ಉದರಪೋಷಣೆಯೇ ಹೊರತು
ಸಾಧಿಸಲಿಲ್ಲ ಮತ್ತೇನನೂ।

ಎನ್ನುವ ಸಾಲುಗಳನ್ನು ನೋಡಿದಾಗ ಅಂತರಂಗದಲ್ಲಿನ ನೋವು ಮತ್ತು ವೇದನೆಯನ್ನು ಗಮನಿಸಬಹುದು. ಸಾಧಿಸಬೇಕೆಂಬುದನ್ನು ಸಾಧಿಸಲಾಗಲಿಲ್ಲ. ಕಾಲ ಕೈ ಜಾರುತ್ತಿದೆ ಎನ್ನುವುದನ್ನು ತಿಳಿದು ಮನಸ್ಸು ತಳಮಳ ಅನುಭವಿಸುತ್ತಿದೆ.

ಬೆಳಕ ನೀಡುವನೆಂಬ ಆತ್ಮದ ಕರೆಯಿರಲು
ಓಗೊಡಲಿಲ್ಲ ತತ್ತರಿಸುವ ಚಿತ್ತ,
ಕಿತ್ತು ಬರಲೀಗ ಇತ್ತ.
ಬೇಕಯ್ಯ, ನಿನ್ನ ವರದ ಅಭಯ ಹಸ್ತ! (ನಾನೇನು ಮಾಡಲಿಲ್ಲ)

ಎಂದು ಕವಿಯು ಹೇಳುವಾ ಇಹಲೋಕದಲ್ಲಿ ಅನುಭವಿಸುವ ಸುಖಕ್ಕೆ ಮಾನ್ಯತೆಯನ್ನು ಇತ್ತು ಇದುವರೆಗೂ ಕಾಲ ಕಳೆದೆ ಕಾಮ, ಕ್ರೊಧ, ಮೋಹ, ಮದ, ಮತ್ಸರ್ಯಗಳೆಂಬ ಅರಿಷಡ್ವರ್ಗಗಳಿಗೆ ಅಧೀನನಾಗಿ ಆತ್ಮದ ಕರೆಯನ್ನು ಅರಿಯಲಿಲ್ಲ. ಅನಂತತೆಯೇ ಅತೀವ ಆನಂದವನ್ನು ಹೊಂದುವ ಆತ್ಮ ಸಂತೋಷವನ್ನು ಉನ್ನತಗತಿಯನ್ನು ಸಾಧಿಸುವ ಮಾರ್ಗವನ್ನು ತಿಳಿದುಕೊಳ್ಳದೆ ಹೋದೆ. ಆದ್ದರಿಂದ ಜಗತ್ತಿನ ಮೋಹದಿಂದ ನನ್ನನ್ನು ಬಿಡಿಸಿ ನಿರ್ಮೋಹಿಯನ್ನಾಗಿ ಮಾಡು. ನಿನ್ನ ವರದ ಅಭಯವವನ್ನು, ಆಸರೆಯ ಕೈಯನ್ನು ನನ್ನೆಡೆಗೆ ಚಾಚೂ ಎಂಬ ಕೂಗನ್ನು, ನಿವೇದನಾ ಭಾವವನ್ನು ಇಲ್ಲಿ ಕಾಣಬಹುದು.

ಇಲ್ಲಿ ಮಾನವನ ಬದುಕಿನಲ್ಲಿ ಜಂಜಾಟಗಳು ಹೇಗೆ ಅಸಹಾಯಕನನ್ನಾಗಿ ಮಾಡಿ ಗುರಿತಲುಪಲು ಅಡ್ಡಿಯನ್ನುಂಟು ಮಾಡುತ್ತವೆ ಎಂಬುದನ್ನು ರಾಗೌ ಅವರು ಚಿತ್ರಿಸಿದ್ದಾರೆ.

ಮಾನವನ ಅಂತರಂಗದ ತೋಳಲಾಟಗಳು ಮಾನಸಿಕವಾಗಿ ಅವನನ್ನು ಜರ್ಜರಿತಗೊಳಿಸುತ್ತವೆ ಎಂಬ ಅಂಶವನ್ನು ಬಿಂಬಿಸಿದ್ದಾರೆ. ಅಲ್ಲದೆ ಮಾನವನು ಇಂದ್ರಿಯ ನಿಗ್ರಹದಿಂದ ಗುರಿಯನ್ನು ಸಾಧಿಸಬಹುದು ಎಂಬ ಅಂಶದ ಮೇಲೆ ಬೆಳಕು ಚೆಲ್ಲಿದ್ದಾರೆ.

**ಕೋರಿಕೆ**

ಹಾಲಿನಂತೆ ಬೆಳ್ಳಗಾಗಿ
ಜೇನಿನಂತೆ ಮಧುರವಾಗಿ
ಸಾಗಲಯ್ಯ ಬದುಕು!

ಮಾನವನ ಜೀವನದಲ್ಲಿ ಹಾಲು ಮತ್ತು ಜೇನಿನ ಗುಣಗಳು ಸೇರಿಕೊಳ್ಳಬೇಕು ಎಂಬ ಬಯಕೆಯನ್ನು ಇಲ್ಲಿ ಕವಿ ವ್ಯಕ್ತಪಡಿಸುವರು. ಹಾಲಿನದು ಶ್ವೇತ ವರ್ಣ. ಆ ಬಣ್ಣದಂತೆ ಕಶ್ಮಲವಿಲ್ಲದೆ, ಶುದ್ಧತೆಯಿಂದ ಜೀವನವನ್ನು ಸಾಗಿಸಬೇಕು. ಪ್ರಾಮಾಣಿಕತೆ, ದೃಢತೆ, ಸತ್‌ಚಾರಿತ್ರ್ಯ ಸದ್ಬಯಕೆ, ಒಳ್ಳೆಯ ನಡತೆ ಮುಂತಾದ ಗುಣಗಳು ಮಾನವ ಬದುಕಿಗೆ ಅತ್ಯಂತ ಅವಶ್ಯಕವಾಗಿದೆ. ಹಾಗೆಯೇ ಜೇನಿನಂತೆ ಮಧುರವಾದ ಗುಣ-ನಡತೆ ಮಾನವ ಬದುಕಿಗೆ ಉತ್ತಮ ದಾರಿದೀಪ, ಜೇನು ಕೇವಲ ಸಿಹಿ ಮಾತ್ರವೇ ಆಗಿರದೆ ಅದು ಉತ್ತಮ ಔಷಧಿಯ ಗುಣಗಳನ್ನು ಹೊಂದಿದೆ. ಜೇನು ತನ್ನಲ್ಲಿನ ಔಷಧಿಯ ಗುಣಗಳಿಂದ ಜಗತ್ತಿನ ಜೀವಿಗಳಿಗೆ ಉಪಯುಕ್ತವಾಗಿ ಅನೇಕ ಶುಭಕಾರ್ಯಗಳಲ್ಲಿ ಬಳಸಲ್ಪಡುವುದು ದೇವರ ನೈವೇದ್ಯಕ್ಕೆ ಬಳಸಲ್ಪಡುವುದು. ಸೌಂದರ್ಯ ಸಾಧನಗಳಲ್ಲಿಯೂ ಬಳಸಲ್ಪಡುತ್ತದೆ. ಇನ್ನೂ ಆಯುರ್ವೇದ ಔಷಧಗಳ ತಯಾರಿಕೆಯಲ್ಲಂತು ಪ್ರಮುಖ ಸ್ಥಾನಪಡೆದಿದೆ. ಈ ಹಾಲು ಮತ್ತ ಜೇನಿನ ಹಾಗೆ ಮಾನವ ಜೀವನವು ಮಧುರವಾಗಿ ಇರಬೇಕು. ಹೀಗೆ ಮಧುರವಾಗಿರಬೇಕಾದರೆ ಮಾನವನಲ್ಲಿ ಪ್ರಾಮಾಣಿಕತೆ, ಕಾರ್ಯಕ್ಷಮತೆ, ದೃಢತೆ ಮುಂತಾದ ಸದ್ಗುಣಗಳು ಇರಬೇಕು ಆಗ ಬದುಕು ಸುಂದರ ಎಂದಿದ್ದಾರೆ ಕವಿ.

ಆದ್ದರಿಂದ ಹಾಲು ಜೇನಿನ ಗುಣಗಳನ್ನು ಮಾನವನು ತನ್ನ ಬದುಕಿನಲ್ಲಿ ಅಳವಡಿಸಿಕೊಳ್ಳಬೇಕೆಂದು ಕವಿಯು ಈ ಪದ್ಯದಲ್ಲಿ ಕರೆ ನೀಡಿದ್ದಾರೆ. ಸ್ವತಃ ರಾಗೌ ಅವರದು ಪ್ರಾಮಾಣಿಕ ನಡೆ-ನುಡಿ ಅವರೊಬ್ಬರ ಸ್ನೇಹಜೀವಿ. ಅವರ ವ್ಯಕ್ತಿತ್ವವೂ ಅಪೂರ್ವವಾದದ್ದು. ಆದ್ದರಿಂದ ಸಮಾಜವು ಪ್ರಾಮಾಣಿಕವಾಗಿ ಇದ್ದರೇ ಉತ್ತಮ ಸಮಾಜ ನಿರ್ಮಾಣವಾಗುವುದೆಂದು ಅಭಿಪ್ರಾಯ ಪಡುವರು.

ನಾನು ನಿಂತೆ ಭೂಮಿ ಮೇಲೆ
ನಿನ್ನ ನೋಡಿ ಮೇಲೆ ಮೇಲೆ
ಬಹಳ ಆಳ ಬಾಂದಳ!
ಎದೆಯ ಮೇಲೆ ಮಾಲೆ ಮಾಲೆ
ಉರುಳುತಿರಲು ಅಗ್ನಿಜ್ವಾಲೆ
ನಿಲ್ಲದೆನ್ನ ತಳಮಳ!

ಈ ಸಾಲುಗಳಲ್ಲಿ ಕವಿಯು ಭೂಮಿಯ ಮೇಲೆ ನಿಂತ ಮಾನವನು ತನಗೆ ಏನೋ ಭಯ ಆತಂಕಗಳು ಕಾಡಿದಾಗ, ಜೀವನದಲ್ಲಿ ನಾನು ಉತ್ಸಾಹದಿಂದ, ನಿರ್ಭಯವಾಗಿ, ನಿರಾಂತಕವಾಗಿ ಮುಂದಡುಗಲು ಇಡಲು ಸಾಧ್ಯವಿಲ್ಲ ಎಂದಾಗ ಆ ಅನಂತ ಶಕ್ತಿಯ ದೈವದ ಆಸರೆಗಾಗಿ ಆಕಾಶ (ಬಾಂದಳ) ದತ್ತ ಮುಖ ಮಾಡುವುದು ಸಹಜವೇ ಹಾಗಾಗಿ ಯಾವುದೋ ಅತೀದ್ರೀಯವಾದ ಶಕ್ತಿಯ ಆಸರೆಗಾಗಿ ಬಯಸುತ್ತಾನೆ ಎನ್ನುವ ಭಾವವು ಇಲ್ಲಿ ವ್ಯಕ್ತವಾಗಿದೆ. ಮಾನವನು ತನ್ನ ಶಕ್ತಿ ಮೀರಿದ ಸನ್ನಿವೇಶಗಳಿಗೆ ಸಿಲುಕಿದಾಗ, ಅವನು ನಂಬಿದ ಎಲ್ಲಾ ಭೌತಿಕ, ಯಾಂತ್ರಿಕ ಶಕ್ತಿಗಳು ಸಹಾಯ ಮಾಡಲಾರದೆ ಕೈ ಚೆಲ್ಲಿದಾಗ ಕೊನೆಗೆ ಅವನು ಕೋರುವ, ಬಯಸುವ, ಆಸರೆ, ಒಂದೇ ಅದೇ ಆ ಅನಂತಶಕ್ತಿ ಎನ್ನುವುದು ಕುರಿತು ಇಲ್ಲಿ ಹೇಳಿದ್ದಾರೆ.

ನಿತ್ಯ ನಿನ್ನ ಬಯಕೆಯಾಗಿ
ಮನದಿ ನಿಂತ ಕಿರಣವಾಗಿ
ಮರ್ತ್ಯವನ್ನೆ ದಾಟಲಿ!

ಸದಾ ನಿನ್ನ ಅನುಗ್ರಹಕ್ಕಾಗಿ ನಿನ್ನ (ಭಗವಂತನ) ಆಸರೆಯನ್ನು ಹೊಂದುವ ಆಸೆಗಾಗಿ ಮನಸ್ಸು ಕಿರಣದ ರೂಪದಲ್ಲಿ ಆ ಮತ್ಸ್ಯಲೋಕವನ್ನು ದಾಟಿ ನಿನ್ನ ಸೇರಲಿ ಆಗ ಸಾರ್ಥಕತೆಯತ್ತ ಸಾಗಿದ ಅನುಭವ ದೊರೆಯುವುದು ಎಂದಿದ್ದಾರೆ.

"ಸಂಕಟ ಬಂದಾಗ ವೆಂಕಟರಮಣ" ನೆನ್ನುವಂತೆ ಬದುಕಿನಲ್ಲಿ ತೊಂದರೆ ಬಂದಾಗಲೇ ದೈವದ ನೆನಪಾಗುವುದು. ಆದರೆ ಆ ದೈವದ ಆಸೆರೆ ಸಿಗುವ ಆಕಾಶದಷ್ಟು ಆಳವಾದದ್ದು, ವಿಶಾಲವಾದದ್ದು, ಆದ್ದರಿಂದ ನಡೆ-ನುಡಿ, ಆಚಾರಗಳಲ್ಲಿ ಶುದ್ಧತೆಯನ್ನು ಹೊಂದಿದವನು ಸುಲಭವಾಗಿ ಗುರಿ ತಲುಪಬಲ್ಲ ಎನ್ನುವ ಮಾತನ್ನು ಇಲ್ಲಿ ಕವಿ ಹೇಳಿದ್ದಾರೆ.

ಮಾನವನು ತನ್ನ ಜೀವನ ಯಾತ್ರೆಯಲ್ಲಿ ಅಲ್ಪ-ಸ್ವಲ್ಪ ಉದ್ವೇಗ, ದುಃಖ, ತೊಂದರೆಗಳನ್ನು ತಡೆದುಕೊಳ್ಳಬಲ್ಲ. ಆದರೆ ಅತಿಯಾದ ದುಃಖದುಮ್ಮಾನ, ತೊಂದರೆಗಳು ಬಂದರೆ ಎಂತಹ ಕಲ್ಲೆದೆಯ, ಕಠಿಣ ಸ್ವಭಾವದವರಾದರೂ ಸಹ ತಡೆದುಕೊಳ್ಳಲಾರರು. ಕುಗ್ಗಿ ಹೋಗುವರು. ತಳಮಳವನ್ನು ತಡೆದುಕೊಳ್ಳದೆ ಸಂಕಟ ಪಡುತ್ತಾನೆ. ಈ ಸಂದರ್ಭದಲ್ಲಿ ಬಸವಣ್ಣನವರ "ಒಲೆಹತ್ತಿ ಉರಿದರೆ ನಿಲಬಹುದಲ್ಲದೆ, ನೆಲ ಹೊತ್ತಿ ಉರಿದರೆ ನಿಲ್ಲಬಹುದೆ" ಎನ್ನುವಂತಹ ವಚನದ ಸಾಲುಗಳು ನೆನಪಾಗುವುದು.

ಮಾನವ ಒಂದು ಹಂತದವರೆಗೆ ಮಾತ್ರವೇ ಯಾವುದೇ ಸಮಸ್ಯೆನ್ನಾಗಲಿ, ಭಾವನೆಗಳನ್ನಾಗಲಿ ಕಷ್ಟ-ಕೋಟಲೆಗಳೆಂಬ ಅಗ್ನಿ ಜ್ವಾಲೆಯು ಅನಿರೀಕ್ಷಿತವಾಗಿಯೋ, ಪದೇ ಪದೆಯೋ ಬಂದರೆ ಮಾನವನಲ್ಲಿ ತಡೆದುಕೊಳ್ಳಲಾರದ ತಳಮಳ, ನೋವು ಉಂಟಾಗುವುದು ಬದುಕಿನ ಬೇಗೆಯನ್ನು ಎದುರಿಸಲಾರದೆ ನಿತ್ರಾಣನಾಗುವನು ಎನ್ನುವುದನ್ನು ಕುರಿತು ಕವಿ ಇಲ್ಲಿ ಹೇಳಿದ್ದಾರೆ. ಇವು ಸ್ವ ಅನುಭವಗಳಂತೆ ಅಭಿವ್ಯಕ್ತವಾಗಿವೆ.



ಕಲ್ಪವೃಕ್ಷ ಕಾಮಧೇನು
ಇರಲು ನೀನು, ನನ್ನದೇನು?
ನಾಕವನ್ನೇ ಮೀಟಲಿ !

ಭಗವಂತನು ಸಕಲವನ್ನು ನೆರವೇರಿಸ ಬಲ್ಲಶಕ್ತಿ ಉಳ್ಳವನು ಅವನ ಅನುಗ್ರಹಕ್ಕಾಗಿ ಕಾಯುವ ಭಕ್ತನಿಗೆ ನಾನು ಬೇಡಿದ್ರನ್ನೆಲ್ಲ ಕೊಡುವ ಕಲ್ಪವೃಕ್ಷವೂ ಬೇಡಿದ್ದನ್ನೆಲ್ಲ ಈಡೇರಿಸುವ ಕಾಮಧೇನವು ಆಗಿ ಕಾಣುತ್ತಾನೆ. ಆ ಭಗವಂತ ಇರುವ ಇರುವ ಸ್ವರ್ಗಕ್ಕೆ ಅಧಿಪತಿಯಾದ ನಿನ್ನನ್ನು ತಲುಪಲು ನನ್ನ ಮನದ ಬಯಕೆಯು ಕಿರಣವಾಗಿ ಸ್ವರ್ಗಕ್ಕೆ ಪ್ರವೇಶಿಸಲಿ ಆಗ ನಿನ್ನ ಅನುಗ್ರಹ ಹೊಂದಬಹುದು ಎನ್ನುವ ಬಯಕೆಯನ್ನು ಇಲ್ಲಿ ವ್ಯಕ್ತಪಡಿಸುವರು.

ಮಿಡಿದು ಬರಲಿ ಚೈತ್ರಗಾನ
ಎನಲು ನಿನ್ನ ದೀಪದಾನ
ತೊಳಲು ತಿರುವ ಜೀವಕೆ!
ನುಗ್ಗಿ ಬರಲಿ ಸುತ್ತಮುತ್ತ
ಬೆಳಕಿನಷ್ಟು ದಿಗ್ಗಜ
ಅಹಂಹುತ್ತ ಕರಗುತ !

ಓ ಆಧ್ಯಾತ್ಮ ಶಕ್ತಿಯೇ ನಿನ್ನಿಂದ ಹೊರಟ ಚೈತ್ರಗಾನವು ಮೀಟುತ (ಹರಿಯುತ) ಬರಲಿ ನನ್ನೆಡೆಗೆ ನನ್ನ ಮನಸ್ಸಿನ ಉದ್ವೇಗವನ್ನು, ತಳಮಳವನ್ನು ಶಮನ ಮಾಡಲಿ, ನೆಮ್ಮದಿಯನ್ನು ಶಾಂತಿಯನ್ನು ತುಂಬಲಿ ತಪಿಸುವ ಹೃದಯಕೆ ಉಪಶಮನ ನೀಡಲಿ

ಎಂದು ಕವಿಯು ಇಲ್ಲಿ ಹೇಳುವರು. ಆ ಅನಂತ ಶಕ್ತಿಯಿಂದ ಬಂದಂತಹ ಬೆಳಕಿನ ಕಿರಣವು ಎಲ್ಲಾ ಅಷ್ಟ ದಿಕ್ಕುಗಳಿಂದ ನುಗ್ಗಿ ಬಂದು ನನ್ನನ್ನು ಸೇರಲಿ. ಆಗ ಮಾನವ ಸಹಜವಾದ ಅಹಂಕಾರವು ಮದ, ಮಾತ್ಸರ್ಯವು ನನ್ನಲ್ಲಿ ನಶಿಸುವುದು ಎನ್ನುವ ಮಾತನ್ನು ಕವಿಯು ಇಲ್ಲಿ ಹೇಳುವ ಮೂಲಕ ತನ್ನ ಮನದ ಇಂಗಿತವನ್ನು ಕೋರಿಕೆಯ ರೂಪದಲ್ಲಿ, ಆ ಆಧ್ಯಾತ್ಮ ಶಕ್ತಿಯಾದ ಭಗವಂತನಲ್ಲಿ ವ್ಯಕ್ತಪಡಿಸುವುದನ್ನು ಇಲ್ಲಿ ಕಾಣಬಹುದಾಗಿದೆ ಮಾನವ ಮತ್ತು ದೈವತ್ವದ ನಡುವಿನ ಅಂತರ, ಅನುಬಂಧ ತುಡಿತ, ಆ ಆಧ್ಯಾತ್ಮದ ಸೆಳೆತವನ್ನು ಇಲ್ಲಿ ಕಾಣಬಹುದಾಗಿದೆ.

**ನಾನು**

'ನಾನು' ಎನ್ನುವ ಕವನದಲ್ಲಿ ಕವಿಯು ಸಾಮಾನ್ಯವಾಗಿ ಮಾನವರು ಹೇಗೆ ಇರಲು ಬಯಸುವರು. ಆದರೆ ನನ್ನ ಕವಿ ಮನಸ್ಸು ಏನನ್ನು ಬಯಸುವುದು ಎನ್ನುವುದನ್ನು ಬಹಳ ಸೊಗಸಾಗಿ ನಿವೇದಿಸಿದ್ದಾರೆ. ಯಾವುದೇ ಮೋಹಕ್ಕೆ ನಾನು ಶರಣಾಗುವುದಿಲ್ಲ. ಕೇವಲ ಆತ್ಮ ಸಂತೋಷವನ್ನು ಮಾತ್ರವೇ ಬಯಸುತ್ತೇನೆ ಎನ್ನುವ ಮಾತುಗಳನ್ನು ಹೇಳುವುದನ್ನು ಕಾಣುತ್ತೇವೆ.

ನೂರು ಯಾಗವ ಮಾಡಿ
ಸುರರೊಡಯನ ಪದವಿ ಬೇಕಿಲ್ಲ!
ನೂರು ಭಾಷಣಗಳ ಬಿಗಿದು
ಪತ್ರಿಕೆಯ ಮೇಲೆ ಹೆಸರ ಕಿತ್ತಿಸುವ
ಗೀಳು ಎನಗಿಲ್ಲ !

ಈ ಮೇಲಿನ ಸಾಲುಗಳಲ್ಲಿ ಕವಿಯು ತನಗೆ ಏನು ಬೇಕಿಲ್ಲ. ಯಾವುದಾದರೂ ಮೋಹವು ತನಗಿಲ್ಲ ಎನ್ನುವುದನ್ನು ಸ್ಪಷ್ಟವಾಗಿ ತಿಳಿಸಿದ್ದಾರೆ. ಯಾವುದೇ ಅಧಿಕಾರ, ಪದವಿ, ಕೀರ್ತಿ, ಪ್ರತಿಷ್ಠೆಗಳ ವ್ಯಾಮೋಹ ನನಗೆ ಇಲ್ಲ. ನನಗೆ ಬೇಕಿರುವ ವಿಚಾರವೇ ಬೇರೆ ನನ್ನ ಆಸೆಯೇ ಬೇರೆ. ಈ ಆಡಂಬರದ ವಿಚಾರಗಳ ಬಗ್ಗೆ ನನಗೆ ಆಸಕ್ತಿ ಇಲ್ಲ ಎನ್ನುವುದನ್ನು ಸ್ಪಷ್ಟಪಡಿಸಿದ್ದಾರೆ.

ಮೇರು ಶಿಖರದ ಸ್ತಂಭ ಭೂಮಿಕೆಯಲಿ
ಕೀರ್ತಿಧ್ವಜವ ನೆಡುವವನಲ್ಲ!
ನೂರು ಜನರ ಮೇಲೆ ಕೂತು ಆಳುವ
ದರ್ಪವೂ ನನ್ನದಲ್ಲ!
ಜಡದ ಜೀವಕೆ ಚೇತನವ ನೀಡುವ
ಬುದ್ಧನೂ ನಾನಲ್ಲ!

ಮೇರು ಪರ್ವತದ ಮೇಲೆ ಏರಿ ಕೀರ್ತಿಧ್ವಜವನ್ನು ನೆಡುವ ಬಯಕೆ ನನಗಿಲ್ಲ. ಆ ಧ್ವಜ ನೆಡುವುದರಿಂದ ಕೇವಲ ಕೀರ್ತಿ ಪ್ರತಿಷ್ಠೆಗಳು, ಅಲ್ಲ ಸಂತೋಷ ಮಾತ್ರವೇ ಲಭಿಸುವುದು. ಆದ್ದರಿಂದ ಅಂತಹ ಆಸೆಯು ನನಗಿಲ್ಲ. ನೂರಾರು ಜನರಿಗೆ ಒಡೆಯನಾಗಿ ಅಧಿಕಾರ ಮಾಡುತ್ತಾ ದರ್ಪದಿಂದ ಮೆರೆಯುವ ಆಸಕ್ತಿಯು ನನಗಿಲ್ಲ ಎನ್ನುವರು ಕವಿ. ಬಿರುದು, ಪದವಿ, ಪ್ರತಿಷ್ಠೆ, ಅಧಿಕಾರಗಳು ಬೇಕೆಂಬ ಹುಚ್ಚು ಕೂಡ ನನಗೆ ಇಲ್ಲ. ಈ ಅಲ್ಪ ಬಯಕೆಗಳ ಬಗ್ಗೆ ನನಗೆ ಆಸಕ್ತಿ ಇಲ್ಲ ಎಂದು ಹೇಳುತ್ತಾರೆ.

ಜಡದ ಜೀವಕೆ ಚೇತನವ ನೀಡುವ
ಬುದ್ಧನೂ ನಾನಲ್ಲ!
ಗಾಳಿ ಬೀಸಿದರೆ ತೂರಿ ಹಾರುವ
ತರಗಲೆಯು ನಾನು
ನೀಲ ನೀರಧಿಯ ಸಿಂಧುವಿನೊಳಗಣ
ಬಿಂದುವು ನಾನು

ಮಾನವ ಮಾತ್ರನಾದಂತಹ ನಾನು ಕೇವಲ ಸಾಮಾನ್ಯನು. ಅಸಾಮಾನ್ಯವಾದಂತಹುದು ನನ್ನಲ್ಲಿ ಏನೂ ಇಲ್ಲ. ಜಡದ ದೇಹಕ್ಕೆ ಚೇತನ ನೀಡುವ ಬದ್ಧನಂತಯೇ ದಿವ್ಯ ಶಕ್ತಿಗಳನ್ನು ಹೊಂದಿದವನು ನಾನಲ್ಲ. ತರಗಲೆಯು ಹೇಗೆ ತನ್ನದೇ ಆದ ಗುರಿಯನ್ನು ಹೊಂದಿರದೆ ಗಾಳಿಯು ಎತ್ತ ಹೋಯ್ದರೇ ಅತ್ತ ತೂರಿ ಹಾರುವುದೋ ಹಾಗೆ ಸಾಮಾನ್ಯನು ನಾನು. ನೀಲಿ ಶರಧಿಯಲ್ಲಿ ತುಂಬಿರುವ ನೀರಿನಲ್ಲಿನ ಒಂದು ನೀರಿನ ಬಿಂದುವು ನಾನು. ಹೀಗೆ ನಾನು ಅಸಾಮಾನ್ಯನಲ್ಲ. ಸಾಮಾನ್ಯರಲ್ಲಿ ಸಾಮಾನ್ಯನು ನಾನು ಎನ್ನುವ ಮಾತುಗಳನ್ನು ಈ ಸಾಲುಗಳಲ್ಲಿ ಕವಿಯು ಹೇಳಿದ್ದಾರೆ.

ಸೃಷ್ಟಿಯೊಳಗಣ ಅಣುವೂ
ತೃಣವೂ ನಾನು
ಶಿವನ ಪಾದ ಕಮಲದ ಮರಕರಂದಕೆ
ನಿತ್ಯ ಹಾರುವ ಮದುಕರನು ನಾನು

ಈ ಸಮಗ್ರ ಸೃಷ್ಟಿಯಲ್ಲಿನ ಒಂದು ಅಣವೂ ನಾನು. ಒಂದು ಜೀವವು ನಾನು. ಒಂದು ಕಣವು ನಾನು. ಈ ವಿಶಾಲ ಸೃಷ್ಟಿಯಲ್ಲಿನ ಒಂದು ಪಾತ್ರವು ನಾನು. ಆದ್ದರಿಂದ ಆ ಶಿವನ ಪಾದ ಕಮಲದಲ್ಲಿನ ಮಕರಂದವನ್ನು ಬಯಸುವ ಮಧುಕರನು ನಾನು. ಆ ದಿವ್ಯಶಕ್ತಿಯಲ್ಲಿನ ಆನಂದವನ್ನು ಬಯಸುವವನು. ಆ ಶಕ್ತಿಯಲ್ಲಿನ ಸಿಹಿಯನ್ನು ಆಸ್ವಾದಿಸುವವನು ನಾನು ಆ ಆಧ್ಯಾತ್ಮದ ಅನುಭವವನ್ನು ಬಯಸುವವನು ನಾನು. ಆ ಅನಂತ ಶಕ್ತಿಯಲ್ಲಿ ಸಿಗುವ ನಿತ್ಯಾನಂದವನ್ನು ಬಯಸುವವನು ನಾನು; ಎನ್ನುವ ಅದ್ಭುತವಾದ, ಅಪೂರ್ವವಾದ ಭಾವನೆಯನ್ನು ಕವಿಯು ಇಲ್ಲಿ ವ್ಯಕ್ತಪಡಿಸುವರು.

ಈ ಸಾಲುಗಳಲ್ಲಿ ಕವಿಯು ನಿತ್ಯಾನಂದವನ್ನು, ಶಾಶ್ವತವಾದ ಸಂಪತ್ತನ್ನು ಬಯಸುವರು. ಸಾಮಾನ್ಯರಲ್ಲಿ ಅತಿ ಸಾಮಾನ್ಯವಾದ ನಾನು ಆ ಶಿವನಲ್ಲಿ ಶರಣಾಗುತ್ತಿದ್ದೇನೆ. ಅವನ ಪಾದ ಕಮಲದಲ್ಲಿನ ದಿವ್ಯಶಕ್ತಿಯನ್ನು ಬಯಸುತ್ತಾ ಅತೀವವಾದ ಶಾಂತಿ, ಸಮೃದ್ಧಿಯನ್ನು ಪಡೆಯ ಬಯಸುವೆ ಎನ್ನುವ ಮಾತುಗಳನ್ನು ಹೇಳಿದ್ದಾರೆ.

ಇಲ್ಲಿ ಕವಿಯು ಲೌಕಿಕ ಸುಖವನ್ನು ಬಯಸುವುದಿಲ್ಲ. ಅಶಾಶ್ವತತೆಯನ್ನು ಬಯಸದೆ ಶಾಶ್ವತವಾದ ಸುಖವನ್ನು ಬಯಸುವುದನ್ನು ಕಾಣಬಹುದು. ಇಲ್ಲಿ ಕವಿಯು ತನಗೆ ಬೇಕಿರುವುದು. ತನ್ನ ಆತ್ಮ ಬಯಸುವುದು ಏನು ಎಂಬುದನ್ನು ಸ್ಪಷ್ಟವಾದ ಸಾಲುಗಳಲ್ಲಿ ವ್ಯಕ್ತಪಡಿಸುವರು.

**ನನ್ನ ಹಾಡು**

ಎಡರು ತೊಡರು ನೋವು ಕಾವು
ಬವಣೆಯಾಯಿತು ಬದುಕಿದು ।
ಭೀತಿ ತೆರೆವ ಹೊಳೆಯ ನಡುವೆ
ಬಂಡೆಯಾಯಿತು ಮನಸಿದು ।
ಬಿಸಿಲು ಮಳೆಗೆ ಕೊರೆವ ಚಳಿಗೆ
ಎಲ್ಲಾ ಕಡೆಗೆ, ಮತ್ತೆ ನುಡಿಗೆ
ತೆರೆದುದಾಯಿತು ಎದೆಯಿದು ।

ಬದುಕಿನ ಏರಿಳಿತಗಳು, ನೋವು, ಸಂಕಟಗಳ, ಭಯ, ಆತಂಕಗಳ ನಡುವೆಯು ನದಿಯ ಮಧ್ಯದಲ್ಲಿ ನಿಂತ ಬಂಡೆಯಂತೆ ಮನಸ್ಸನ್ನು ಗಟ್ಟಿ ಮಾಡಿಕೊಳ್ಳಬೇಕು. ಪ್ರಕೃತಿಯ ಋತುಗಳಿಗೆ ತಕ್ಕಂತೆ ಬದಲಾಗುವ ಹಾಗೆ ಮಾನವನ ಮನಸ್ಸು ಕೂಡ ಜೀವನದಲ್ಲಿ ಉಂಟಾಗುವ ಬದಲಾವಣೆಗೆ ಒಗ್ಗಿಕೊಂಡು ಬದುಕುವುದು ಅಭ್ಯಾಸವಾಗುತ್ತದೆ ಎಂಬುದನ್ನು ಕವಿಯು ಇಲ್ಲಿ ಹೇಳುವರು.

ಕೋಟಿ ಚೇಳು ಕುಟುಕಿದಂತೆ
ಬೇಗೆ ತಂದು ಎರಚಿದೆ !
ನಡೆವ ನಡೆಗೆ ತೊಡರ ತಂದು
ಹಿಂಡಿ ಎದೆಯ ಎಸೆದಿದೆ !
ಜೇಡ ಬಲೆಯ ನೆಯ್ದ ತೆರದಿ
ಮನದಿ ಮಂಜು ಮುಸುಕಿದೆ !
ಅಳುವ ಕಡಲಲಿ ನಾಕದೋಣಿ
ಒಂದೆ ಸಮನೆ ಮುಳುಗಿದೆ !

ಬದುಕಿನಲ್ಲಿ ಕೋಟಿ ಚೋಳುಗಳು ಕುಟುಕಿದಾಗ ಆಗುವ ನೋವು ಮನಸ್ಸಿಗೆ ಆಗಿದೆ. ಅದರ ಜೊತೆಗೆ ಅನೇಕ ಎಡರು ತೊಡರುಗಳು ಮನಸ್ಸನ್ನು ಬಾದೆಪಡಿಸಿವೆ. ಆದ್ದರಿಂದ ಜೇಡರ ಬಲೆಯಂತೆ ಮನಸ್ಸಿನ ಮೇಲೆ ಯಾವುದೋ ಯಾತನೆಯ ಪರೆಯು ಮುಸುಕಿದೆ. ಇಂತಹ ಸಂದರ್ಭದಲ್ಲಿ ಬದುಕಿನ ದೋಣಿಯು ಮುಳುಗುವಂತಹ ಪರಿಸ್ಥಿತಿಯು ಬಂದಿದೆ ಹಾಗಿರುವಾಗ ಓ ಸದ್ಗುರುವೆ ನಿನ್ನ ಕೃಪೆಯಿಂದ ನಿನ್ನ ಆಸರೆಯಿಂದ ಇವುಗಳನ್ನು ದಾಟಿ ಮುಂದೆ ಹೋಗುವ ಹಾಗೆ ಮಾಡು ಎಂದು ಕವಿಯು ಗುರುವಿನಲ್ಲಿ ಕೇಳುವರು.

ಬೆಂಢನೊಂದ, ತೇಲಲೆಂದು ಬಿಟ್ಟರೆ
ಮುಳಗಿ ತಳವ ಸೇರಿತು।
ಕಲ್ಲನೊಂದ ಮುಳಗಲೆಂದು ಬಿಟ್ಟರೆ
ಮೇಲೆ ಮೇಲೆ ತೇಲಿತು।
ಒಳಗಿನಾಳದಿಂದ ನುಡಿಯಿತಿಂತು ಎಚ್ಚರ:
(ಬಹಳ ಎದೆಯ ಪಾತ್ರದಲ್ಲಿ ಮಿಡಿದು ಬಂದ ಉತ್ತರ !)
ನೆನಸಿದಂತೆ ಇಲ್ಲಿ ಎಲ್ಲ ಆಗವು
ಆಗುವುದಾದರೆ ಬದಲು ಅದರ ರೂಪವು!'

ಕೆಲವೊಮ್ಮೆ ಬದುಕಿನಲ್ಲಿ (ಬೆಂಡು) ಹಗುರವಾದಂತಹ ವಿಷಯ ಅಥವಾ ಪರಿಸ್ಥಿತಿ ಎಂದು ಸುಮ್ಮನೆನಿದ್ದು ಬಿಟ್ಟರೆ ಅದು ತೀವ್ರವಾದಂತಹ ಪರಿಣಾಮವನ್ನೇ ಉಂಟುಮಾಡಬಹುದು ಮತ್ತೆ ಕೆಲವೊಮ್ಮೆ ವಿಷಮ ಪರಿಸ್ಥಿತಿ ಎಂದುಕೊಂಡು ಅತಿಯಾದ ಕಾಳಜಿ ಎಚ್ಚರಿಕೆಯಿಂದ ನಿಭಾಯಿಸಲು ಮುಂದಾದಾಗ ಅದು ತುಂಬ ಸುಲಭವಾಗಿ ಬಗೆಹರಿದು ಬಿಡಬಹುದು. ಬದುಕಿನಲ್ಲಿ ನಡೆಯುವ ಘಟನೆಗಳು, ಒದಗಿಬರುವಂತಹ ಸಂದರ್ಭಗಳು ನಮ್ಮ ಅಳತೆಗೆ, ಆಲೋಚನೆಗೆ ಮೀರಿದಂತವುಗಳು. ಆದ್ದರಿಂದ ಮಾನವನು ಸಮಚಿತ್ತ ಭಾವದಿಂದ ಇರಬೇಕು ಎಂದಬ ಸತ್ಯವನ್ನು ಎಚ್ಚರಿಕೆಯನ್ನು ನೀಡುತ್ತವೆ. ಇಲ್ಲಿ ಅಂದರೆ ಭವದ ಬದುಕಿನಲ್ಲಿ ಮಾನವನು ಎಣಿಸಿದಂತೆ ಅಂದುಕೊಂಡಂತೆ ಎಲ್ಲ ಘಟನೆಗಳು ನಡೆಯುವುದಿಲ್ಲ ಕೆಲವೊಮ್ಮೆ ನಮ್ಮಿಷ್ಟದಂತೆ ಜರುಗಿದರೆ ಕೆಲವೊಮ್ಮೆ ಆ ದೈವದ ಆಣತಿಯಂತೆ ಜರುಗುತ್ತವೆ ಎಂಬುದನ್ನು ರಾಗೌ ಅವರು ತಮ್ಮ ಸ್ವ ಅನುಭವದಿಂದಲೇ ಬರೆದಂತಿದೆ.

ಕಷ್ಟವಾಯ್ತು ಕಡಲು : ಅಂತೆ ವಿಸ್ತರ ಬದುಕಿಗೆ !
ದೂರದಡಕೆ ಒಯ್ಯುತಿದೆ ಕುಳಿತ ನಮ್ಮ ನಾವೆಯ
ಸುಖದ ತಾರೆ ಮಿಂಚಿ ಇಣುಕುವುದಾದರೆ
ಎಬ್ಬಿಸುವುದು ಅನುಮಾನದ ತೆರೆಯ !

ಇಹ ಲೋಕದ ಬದುಕಿನಲ್ಲಿ ಮಾನವನು ಕೇವಲ ಬೊಂಬೆಯಂತೆ ಮಾತ್ರವೇ ಎಂಬುದು ಮಾನವರ ಬದುಕನ್ನು ಅವಲೋಕಿದಾಗ ತಿಳಿಯುತ್ತದೆ. ಆದ್ದರಿಂದಲೇ "ಸೂತ್ರಧಾರಿ ನೀನು ಪಾತ್ರಧಾರಿ ನಾನು" ಎನ್ನುವ ಮಾತು ನೆನಪಾಗುವುದು. ಮಾನವನ ಮನಸ್ಸಿನ ಆಸೆಗೆ, ಭಾವನೆಗೆ ಎಲ್ಲೆ ಎಂಬುದಿಲ್ಲ ಅದು ಆಕಾಶದಂತೆ ವಿಸ್ತಾರವಾದುದ್ದು ಮಿತಿಯಿಲ್ಲದ್ದು ಆಕಾಶದ ಎಲ್ಲೆ ಹೇಗೆ ಕಣ್ಣಳತೆಗೆ ಸಿಗುವುದಿಲ್ಲವೊ ಹಾಗೆ ಮಾನವನ ಆಸೆಗೂ ಮಿತಿ ಎಂಬುದಿಲ್ಲ. ಬದುಕಿನಲ್ಲಿ ಸುಖವು ಹೆಚ್ಚಾಗಿ ದೊರೆತಾಗ ಮುಂದೆ ಪರಿಸ್ಥಿತಿ ಹೇಗೆ ಮಾರ್ಪಡುವುದೋ ಎನ್ನುವ ಆತಂಕವು ಮಾನವರ ಮನಸ್ಸಿನಲ್ಲಿ ಮೂಡಿ ಭಯ-ಆತಂಕ ಉಮಟುಮಾಡುವುದು. ಆದ್ದರಿಂದ "ಅವನ ನಿಯಮ ಮೀರಿ ಇಲ್ಲಿ ಏನು ಸಾಗದು, ನಾವು ನೆನಸಿದಂತೆ ಬಾಳಲೇನು ನಡೆಯದು. ವಿನೋದವಾಗಲಿ, ವಿಷಾದವಾಗಲಿ ಅದು ಅವನ ಕಾಣಿಕೆ" ಎನ್ನುವ ಭಾವದಿಂದ ಬದುಕಿದಾಗ ಬದುಕು ಸವೆಸಿದಾಗ ಬದುಕಿನಲ್ಲಿ ಜರುಗುವ ಘಟನೆಗಳನ್ನು ಎದುರಿಸುವ ಶಕ್ತಿ ಮಾನವನ ಮನಸ್ಸಿಗೆ ಲಭಿಸುವುದು ಆದ್ದರಿಂದ ನಿರ್ಲಿಪ್ತ ಭಾವವನ್ನು ತೆಳಯಬೇಕು ಹಾಗೆ ಮನವು ಶಾಂತವಾಗುವುದು.

ಕಷ್ಟವೇ ಬರಲಿ, ಸುಖವೆ ಬರಲಿ
ಕಹಿಯೊ ಸಿಹಿಯೊ ಇರಲಿ ಏನೊ;
ಹಾಲು-ಸಕ್ಕರೆ ಬೆರತ ಹಾಗೆ
ಬೆರಸಿಕೊಳ್ವೆ ಎರಡನೂ !

ಕಷ್ಟವೇ ಬಂದರೂ ಸರಿಯೇ ಬರಲಿ ಬಿಡು, ಸುಖವೇ ಬಂದು ಸರಿಯೆ ಬರಲಿಬಿಡು ಬಾಳಿನಲ್ಲಿ ಸಿಹಿ ಕಹಿಯು ಏನೆ ಬಂದರೂ ಅದನ್ನು ಸಮಾನವಾಗಿ ಸ್ವೀಕರಿಸುವೆ ಎಮಬ ಭಾವವು ಮನಸ್ಸಿಗೆ ಬಂದಾಗ ಬದುಕು ನಿರಾತಂಕವಗಿ ಸಾಗುತ್ತದೆ. ಹಾಲು ಸಕ್ಕರೆಯು ಬೆರತಾಗ ಹೇಗೆ ಅದನ್ನು ಆ ಸ್ವಾದಿಸುತ್ತೇವೆಯೋ ಹಾಗೆ ಬದುಕಿನ ಕಷ್ಟ-ಸುಖಗಳನ್ನು ಸಮಾನವಾಗಿ ಸ್ವೀಕರಿಸುವ ಗುಣವನ್ನು ಬೆಳೆಸಿಕೊಳ್ಳಬೇಕು ಎಂಬುದನ್ನು ಕವಿ ಇಲ್ಲಿ ತಿಳಿಸುವುದು.

ಬಂದರು ಗುರುವೆ ನೂರು ಕಷ್ಟ
ಸ್ವಾಗತಿಸುಲೆ ಸಂತಸದಿ ಸಂತತ :
ಆದರಿಷ್ಟು ಕೇಳ್ವೆನೊಂದ
ನಿನ್ನ ಮರೆಯದಂತೆ ಮಾಡು ಹರಸುತ !

ಬದುಕಿನ ಪಯಣದಲ್ಲಿ ಏನೇ ಬಂದರೂ, ನೂರಾರು ಕಷ್ಟದ ಪರಿಸ್ಥಿತಿಗಳೇ ಬಂದರೂ, ಸುಖವೇ ಬದುಕಿನಲ್ಲಿ ಬಂದರೂ ಸಂತೋಷದಿಂದ ತಾಳ್ಮೆಯಿಂದ, ಸ್ಥಿತಪ್ರಜ್ಞನಾಗಿ ಸ್ವೀಕರಿಸುತ ಬದುಕಬೇಕು ಎಂದು ಕವಿ ತಿಳಿಸುವರು ಓ ಗುರುವೇ, ಓ

ಅನಂತವಾದ ಶಕ್ತಿಯೇ ನಿನ್ನಲ್ಲಿ ನನ್ನದೊಂಡು ಬೇಡಿಕೆಯಿದೆ ಅದೇನೆಂದರೆ ಎಂದಿಗೂ ನಿನ್ನನ್ನು ಮರೆಯದಂತೆ ಮಾಡು, ನನ್ನನ್ನು ಹರಸು ಎನ್ನುವ ನಿವೇದನೆಯನ್ನು ರಾಗೌ ಅವರು ಈ ಪದ್ಯದ ಕೊನೆಯ ಸಾಲುಗಳಲ್ಲಿ ಮಾಡಿದ್ದಾರೆ.

"ದೈವವನ್ನು ಮರೆತವನಿಗೆ ಮೃತ್ಯುವೇ ಸಾರಥಿ" ಎನ್ನುವ ಮಾತಿದೆ ಹಾಗೆ ಮಾನವನು ಬದುಕಿನಲ್ಲಿ ದೈವದ ಆಧ್ಯಾತ್ಮದ ಆಸರೆಯನ್ನು ಬಯಸುತ ಬದುಕನ್ನು ಸಾಗಿಸುವಾಗ ಬದುಕು ಸ್ವಲ್ಪ ನಿರಾಂತಕವಾಗಿ ಸಾಗುವುದು ಗುರಿ ಸೇರುವಲ್ಲಿ ಮಾನವನಿಗೆ ದೃಢತೆಯು, ಆತ್ಮಬಲವು ಹೆಚ್ಚುವುದು.

**ಮುಳುಗು ಮನವೆ**

ಮಾನವನು ಮನಸ್ಸು ಮಾಡಿದರೆ ಅನೇಕ ಅಸಾಧ್ಯಗಳನ್ನು ಸಾಧಿಸಬಹುದಾಗಿದೆ. ಅಂತಹ ಮಾನವನು ಹೇಗೆ ತನ್ನನ್ನು ತಾನು ಅರಿಯಲು ಪ್ರಯತ್ನಿಸಬೇಕು ಎನ್ನುವುದರ ಬಗ್ಗೆ ಈ ಕವನದಲ್ಲಿ ಪ್ರಸ್ತಾಪಿಸಬಹುದಾಗಿದೆ. ಮಾನವ ತನ್ನ ಮನಸ್ಸನ್ನು ಹೊಕ್ಕಿ ನೋಡಿದರೆ ಸತ್ಯದರ್ಶನವು ಆಗುವುದು. ಅದರ ಅಗಾಧತೆಯ ಅರಿವು ತನಗೆ ಆಗುವುದು ಎಂಬುದನ್ನು ಕುರಿತು ಕವಿಯು ಇಲ್ಲಿ ಹೇಳಿದ್ದಾರೆ.

ಮುಳುಗು ಮನವೆ ಮುಳುಗು ಮನವೆ
ಕಡಲ ಆಳಕೆ
ರತ್ನಸಿರಿಯ ಹುಡುಕಿ ತರಲು
ಮುಳುಗು ಆಳಕೆ

ಇಲ್ಲಿ ಮನಸ್ಸನ್ನು ಕುರಿತು ಮುಳುಗು ಅಂದರೆ ಹುಡುಕು ನಿನ್ನನ್ನು ನೀನು ಅರಿಯಲು, ಹುಡುಕು ನೀನು ತಿಳಿದು ಕೊಂಡಿರುವುದಕ್ಕಿಂತ ಹೆಚ್ಚಿನದು ಮತ್ತೇನೂ ಇದೆ. ಆ ಸತ್ಯದ ದರ್ಶನವಾಗಬೇಕಾದರೆ ನೀನು ಅತಿ ಹೆಚ್ಚಿನ ಶೋಧನೆಯನ್ನು ಮಾಡಬೇಕು. ಕಡಲಿನ ಆಳಕ್ಕೆ ಹೋಗಿ ಹುಡುಕಿದಂತೆಲ್ಲ ಅಪೂರ್ವವಾದ ರತ್ನಗಲು, ಅಪರೂಪದ ವಸ್ತುಗಳು ಹೇಗೆ ದೊರಕುತ್ತವೋ ಆಗೆ ನೀನು ಅಂತರಂಗ ಶೋಧನೆ ಮಾಡಿಕೊಳ್ಳುವುದರಿಂದ ನಿನಗೆ ಹೆಚ್ಚಿನ ಜ್ಞಾನವು ಸಿಗುತ್ತದೆ ಎನ್ನುವುದನ್ನು ಕುರಿತು ಇಲ್ಲಿ ಕವಿ ಹೇಳುವರು.

ದೇಹಗಣಿಯು ಆತ್ಮಮಣಿಯು
ನಿತ್ಯ ನೂತನ
ಅದುವೆ ಗುರು ತಮೋ ಹಾರಿ
ದಿವ್ಯ ಚೇತನ

ಮಾನವ ದೇಹವೆಂಬ ಗಣಿಯಲ್ಲಿ ಪ್ರಕಾಶಿಸುವ ಆತ್ಮವೆಂಬ ಮಣಿಯು ಅಡಗಿದೆ. ಅದನ್ನು ಹೊರತೆಗೆದಾಗ ಆತ್ಮ ಪ್ರಕಾಶವು ಗೋಚಿಸುವುದು ಆಗ ಅಜ್ಞಾನದ ಕತ್ತಲೆಯು ಹರಿದು ಜ್ಞಾನದ ಕಣ್ಣುಗಳು ತೆರೆಯುತ್ತವೆ. ಜಗತ್ತು ಮೊದಲಿನ ನೋಟದಲ್ಲಿ ಗೋಚರಿಸಿದಕ್ಕಿಂತ ಭಿನ್ನವಾಗಿ ಗೋಚರಿಸುತ್ತದೆ. ಈ ಆತ್ಮವೆಂಬ ದಿವ್ಯಮಣಿಯು ನಿತ್ಯ ನೂತನವಾದದ್ದು. ಅದು ಹುಟ್ಟು-ಸಾವುಗಳಿಂದ ಮುಕ್ತವಾದದ್ದು. ಆ ಆತ್ಮನು ನೀಡುವ ಅರಿವು ಗುರುವಿನ ಹಾಗೆ ನಿನಗೆ ದಾರಿತೋರಿಸುವುದು ನಿನ್ನಲ್ಲಿ ಹುದುಗಿರುವ ಕತ್ತಲನ್ನು ನಿವಾರಿಸಿ ನಿನಗೆ ಬೆಳಕಿನ ದಾರಿಯನು ತೋರಿಸುವುದು. ಆ ಅರಿವಿನ ದಿವ್ಯಚೇತನವು ನಿನ್ನಲ್ಲಿ ಹೊಸ ಚೈತನ್ಯವನ್ನು ಉಂಟುಮಾಡುವುದು ಆದ್ದರಿಂದ ಮನಸ್ಸೆಂಬ ಕಡಲ ಆಳಕೆ ಮುಳುಗಿ ಶೋಧಿಸಬೇಕು ಎನ್ನುವ ಮಾತುಗಳನ್ನು ಇಲ್ಲಿ ಹೇಳಲಾಗಿದೆ.

ಕರೆವ ಕಲ್ಪತರುವು, ಅದುವೆ
ಬಯಕೆ ಜೇನು
ಸಕಲ ಇಷ್ಟ, ಸಿರಿಯ ಕೊಡುವ
ಕಾಮಧೇನು

ಅರಿವೆಂಬುದದು ದೊರೆತಾಗ ಅದು ಮಾನವನಿಗೆ ಎಲ್ಲಾ ಬಯಕೆಗಳನ್ನು ಈಡೇರಿಸುವ ಕಲ್ಪತರುವಿನಂತೆ ಜೊತೆಯಾಗಿರುತ್ತದೆ. ಯಾವುದೇ ಸಂದರ್ಭದಲ್ಲಿಯೂ ಭಯಪಡದೆ ನಮ್ಮ ಎಲ್ಲ ಬಯಕೆಗಳನ್ನು ಈಡೇರಿಸಿಕೊಳ್ಳುವ ನಿಟ್ಟಿನಲ್ಲಿ ಅಮೃತದಂತೆ ಕೆಲಸ ಮಾಡುತ್ತದೆ. ಮಾನವನ ಮನಸ್ಸಿಗೆ ಅರಿವುದೊರೆತಾಗ ಅದು ಸ್ವರ್ಗ ಲೋಕದಲ್ಲಿನ ಕಾಮಧೇನುವಿನಂತೆ ಆಸೆರೆಯಾಗುವುದು. ಮನಸ್ಸಿನ ಬೇಡಿಕೆಗೆ ತಕ್ಕಂತೆ ಸ್ಪಂದಿಸಿ ಅರಿವಿನ ಮಾರ್ಗವನ್ನು ತೋರಿಸುತ್ತಾ ನಡೆಸುವುದು. ಆದ್ದರಿಂದ ಮನಸ್ಸಿನ ಒಳ ಹೊಕ್ಕು ನೋಡುವುದು ಅವಶ್ಯವೆನ್ನುತ್ತಾರೆ.

ಎದೆಯ ಕದವ ತೆರೆದು ನೀನು
ಹುಡುಕಿ ನೋಡು
ನಿನಗೆ ಎಲ್ಲ ದೊರಕಲಹುದು
ಒಳಗೆ ನೋಡು

ಮಾನವನ ಮನಸ್ಸಿನ ಎದೆಯ ಮುಚ್ಚಿದ ಕದವನ್ನು (ಬಾಗಿಲನ್ನು) ತೆರೆದು ನೋಡಿದಾಗ ಅರಿವಿನ ದಿವ್ಯ ಸಂದೇಶವು ದೊರಕುವುದು. ಮನಸ್ಸಿಗೆ ಅನೇಕ ಬಗೆಯ ಪರದೆಗಳು ಆವರಿಸಿ ಅವು ಮನಸ್ಸನ್ನು ಮಲಿನಗೊಳಿಸುತ್ತವೆ. ಮನಸ್ಸಿನ ಬಾಗಿಲನ್ನು ಮುಚ್ಚಿ ಬಿಡುತ್ತವೆ. ಆದ್ದರಿಂದ ಆವರಿಸಿದ ಕತ್ತಲೆಯನ್ನು, ಸಂಕೋಲೆಗಳನ್ನು ಸರಿಸಿ ನೋಡಿದಾಗ ಮಾನವನಿಗೆ ನಿಜವಾಗಿಯೂ ಬೇಕಾದುದು ಏನು ಅದು ಅಲ್ಲಿ ಸಿಗುವುದು

ಆದ್ದರಿಂದ ಒಮ್ಮೆ ನಿನ್ನ ಮನಸ್ಸಿನ ಬಾಗಿಲನ್ನು ತೆರೆದು ನೋಡು ಎನ್ನುವ ಮಾತುಗಳನ್ನು ಇಲ್ಲಿ ಕವಿ ಹೇಳಿದ್ದಾರೆ.

ಒಡಲ ಕಡಲ ರತ್ನ ಖನಿಯ
ನಿಜನಿವಾಸಕೆ
ಮುತ್ತನಾಯ್ದು ತರಲು, ಮನವೆ
ಮುಳುಗು ಆಳಕೆ

ಮಾನವನ ಒಡಲು (ಶರೀರ) ಎಂಬ ಕಡಲಿನ ರತ್ನ ಖಚಿತವಾದ ಖಜಾನೆಯದ ಮನಸ್ಸಿನ ಒಳಹೊಕ್ಕು ನೋಡು, ಅದರಲ್ಲಿ ನಿಷ್ಕಲ್ಮಶ, ಪ್ರೀತಿ, ಮಾಧುರ್ಯ, ಕರುಣೆ, ದಯೆ, ಸಾಮರಸ್ಯ, ಸತ್ವಿಕತೆ, ಸತ್ಯ, ತ್ಯಾಗ, ಧರ್ಮ, ವಾತ್ಸಲ್ಯ, ನಿರ್ಮೋಹ, ಕ್ಷಮೆ ಮುಂತಾದ ಅದ್ಬುತವಾದ ಮುತ್ತುಗಳನ್ನು ಹೊರಗೆ ತಗೆದು ಕೊಂಡು ಬಾ. ಮಾನವ ಅವುಗಳನ್ನು ತಂದು ನಿನ್ನಲ್ಲಿ ಅಳವಡಿಸಿಕೋ. ಅನ್ಯರಿಗೂ ಹಂಚು ಆದ್ದರಿಂದ ಮಾನವನಲ್ಲಿ ಮಾನವತ್ವ ಮೆರೆಯುವುದು. ಸಾಮರಸ್ಯ ಉಳಿಯುವುದು.

ಒಟ್ಟಿನಲ್ಲಿ ಮಾನವ ತನ್ನ ಮನಸ್ಸಿನ ಆಳವನ್ನು ಹೊಕ್ಕಿ ನೋಡಿದರೆ ಅಪೂರ್ವವಾದ ಶಾಶ್ವತ ಸಂಪತ್ತು ಸಿಗುವುದು. ಅದು ಮಾನವನ ಜೀವನಕ್ಕೆ ಅತಿ ಅಗತ್ಯವಾದುದ್ದು ಎನ್ನುವ ಅಭಿಪ್ರಾಯವನ್ನು ಇಲ್ಲಿ ಕವಿ ವ್ಯಕ್ತಪಡಿಸಿದ್ದಾರೆ.

# ಉಪಸಂಹಾರ

ಡಾ. ರಾಗೌ ಅವರ ಕಾವ್ಯಗಳಲ್ಲಿ ಆಧ್ಯಾತ್ಮ ಮತ್ತು ಆತ್ಮ ನಿವೇದನೆ ಎಂಬ ವಿಷಯದಲ್ಲಿ ಆಧ್ಯಾತ್ಮದ ನೆಲೆಯಲ್ಲಿ ಕಂಡುಬರುವ ಅಂಶಗಳಾದ ಧರ್ಮ, ಆಧ್ಯಾತ್ಮಿಕ ಸೆಳೆತ, ಆತ್ಮವು ಆಧ್ಯಾತ್ಮದತ್ತ ಸಾಗಲು ಇರುವಂತಹ ಅಡ್ಡಿಗಳು ಬದುಕಿನ ಜಂಜಾಟಗಳಿಂದ ಮುಕ್ತಿಯನ್ನು ಬಯಸುವ ನಿಟ್ಟಿನಲ್ಲಿ ಆಧ್ಯಾತ್ಮದ ಅರಿವು ಬದುಕಿನ ಸಾರ್ಥಕ ಪಯಣಕ್ಕೆ ಆಧ್ಯಾತ್ಮದ ಆಸರೆ ಮುಂತಾದ ಅಂಶಗಳು ಇಲ್ಲಿ ಹೇಗೆ ಮೂಡಿಬಂದಿವೆ ಎಂಬುದರ ಕುರಿತು ಬರೆಯಲಾಗಿದೆ.

ಯಾವುದೇ ಪಂಥ, ಸಿದ್ಧಾಂತ, ವಾದ ತತ್ವಗಳಿಗೆ ಅಂಟಿಕೊಳ್ಳದೆ ಎಲ್ಲೆಲ್ಲಿ ಒಳ್ಳೆಯ ಅಂಶಗಳಿವೆಯೋ ಅವು ಎಲ್ಲೆಲ್ಲಿ ಹರಡಿದೆಯೋ ಅದನ್ನೆಲ್ಲ ಕಾವ್ಯವಾಗಿಸುತ್ತಾ ಬಂದಿದ್ದಾರೆ. ತಾವು ಕಂಡಂತಹ ಪಡೆದಂತಹ, ತಿಳಿದಂತಹ ಸ್ವ ಅನುಭವಗಳನ್ನು ರಾಗೌ ಕಾವ್ಯಗಳಲ್ಲಿ ಚಿತ್ರಿಸಿದ್ದಾರೆ. ಅನೇಕ ಸಮಸ್ಯೆಗಳು ಕೆಟ್ಟ ಧೋರಣೆಗಳ ಬಗ್ಗೆ ಸಹಾನುಭೂತಿ ವ್ಯಕ್ತಪಡಿಸಿದ್ದಾರೆ. ಕೆಲವೊಂದು ಬದುಕಿನ ಜಂಜಾಟ ಮಾನಸಿಕ ತಳಮಳ ಈ ಎಲ್ಲಾ ಅಂಶಗಳು ಕಾವ್ಯದ ವಸ್ತುಗಳಾಗಿವೆ. ಜೀವನದಲ್ಲಿ ತಮಗಾದ ಅನುಭವ ಕಷ್ಟ-ಸುಖಗಳು, ಸಮಾಜದ ವೈಚಿತ್ರಗಳು, ಭಾರತದಲ್ಲಿನ ಆಧ್ಯಾತ್ಮಿಕ ಸಂಪತ್ತು ಮುಂತಾದವುಗಳನ್ನು ತಮ್ಮ ಕಾವ್ಯದಲ್ಲಿ ಅಭಿವ್ಯಕ್ತಿಸಿ ಕನ್ನಡ ಸಾಹಿತ್ಯಕ್ಕೆ ಉತ್ಕೃಷ್ಟ ಕವನಗಳನ್ನು ನೀಡುತ್ತಿದ್ದಾರೆ. ಆಧ್ಯಾತ್ಮದ ನೆಲೆಯಲ್ಲಿ ಕಂಡುಬರುವ ವಿಷಯಗಳನ್ನು ತಮ್ಮದೇ ಆದ ವಿಭಿನ್ನ ವಿಶಿಷ್ಟ ದೃಷ್ಟಿಕೋನಗಳಿಂದ ನೋಡಿ ಅವುಗಳ ಕುರಿತಾಗಿ ತಮ್ಮದೆ ನಿಲುವನ್ನು ವ್ಯಕ್ತಪಡಿಸುವರು ಹಾಗೂ ಆತ್ಮ, ಪರಮಾರ್ಥಿಕತೆ ಮುಂತಾದವುಗಳನ್ನು ಕುರಿತು ಹೇಳುತ್ತಾ ಮಾನವನು ಅನುಸರಿಸಬೇಕಾದ ವಿಷಯಗಳ ಬಗ್ಗೆ ಬೆಳಕು ಚೆಲ್ಲುತ್ತಾರೆ. ಹಿರಿಯ ಸಾಹಿತಿಗಳಾದ ಕುವೆಂಪು, ಬೇಂದ್ರೆ ಮುಂತಾದವರಿಂದ ಹಿಡಿದು ಮಹಾನವ್ಯಕ್ತಿಗಳಾದ ಬಸವಣ್ಣ, ಅಲ್ಲಮಪ್ರಭು ಮುಂತಾದ ಮಹಾನ್‌ವ್ಯಕ್ತಿಗಳಿಂದ ಪ್ರೇರಣೆಗೊಂಡು ಹೊಸ ಹೊಸ ಚಿಂತನೆಗಳನ್ನು ಮೂಡಿಸಿರುವುದನ್ನು ಇಲ್ಲಿ ಗಮನಿಸಬಹುದು.

ಸಮಾಜ, ನಾಡು-ನುಡಿ, ಪ್ರಕೃತಿ ಜೀವನ, ವಿಜ್ಞಾನ, ವ್ಯಕ್ತಿಚಿತ್ರಣ, ತಂತ್ರಜ್ಞಾನ, ಧರ್ಮ, ತಾತ್ವಿಕತೆ, ಆಧ್ಯಾತ್ಮ, ಸಾಹಿತ್ಯ, ಇತಿಹಾಸ ಇನ್ನು ಮೊದಲಾದ ವಿಚಾರಗಳನ್ನು ಕುರಿತು ರಾಗೌ ಕಾವ್ಯ ರಚಿಸಿದ್ದಾರೆ. ಇವರ ಕಾವ್ಯಗಳಲ್ಲಿ ವಸ್ತುವೈವಿಧ್ಯತೆ ಇದೆ. ಈ ನಿಬಂಧದಲ್ಲಿ ಮುಖ್ಯವಾಗಿ ಆಧ್ಯಾತ್ಮ ಹಾಗೂ ಆತ್ಮ ನಿವೇದನೆ ಎಂಬುದು ಕೇಂದ್ರ ವಿಷಯವಾಗಿದ್ದು, ಅದರಲ್ಲಿ ಮಾನವನಲ್ಲಿನ ಆಧ್ಯಾತ್ಮದ ಸೆಳೆತ, ಆಧ್ಯಾತ್ಮದ ಆಸರೆ, ಆಧ್ಯಾತ್ಮದ ನೆಲೆಗಳು ಈ ವಿಷಯಗಳಿಗೆ ಸಂಬಂಧಪಟ್ಟ ವಿಚಾರಗಳನ್ನು ಮಾತ್ರ ಗುರುತಿಸಲಾಗಿದೆ.

ಮಾನವ ಸಂಘಜೀವಿ ಸಮಾಜದ ಹೊರತಾಗಿ ಅವನು ಜೀವಿಸಲು ಕಷ್ಟಸಾಧ್ಯ. ಸಮಾಜದಲ್ಲಿ ಬದುಕುತ್ತಿರುವ ಸಾಹಿತಿ ಆಯಾ ಸಮಾಜದ ಒಂದು ಭಾಗವೇ ಆಗಿರುತ್ತಾರೆ. ಅಲ್ಲಿನ ಸ್ಥಿತಿಗಳು ಸಾಹಿತಿಯ ಮನಸ್ಸಿನ ಮೇಲೆ ಪ್ರಭಾವ ಬೀರುತ್ತವೆ. 'ರವಿ ಕಾಣದನ್ನು ಕವಿ ಕಂಡ' ಎಂಬ ಗಾದೆಮಾತಿದೆ. ಹಾಗೆ ಸಾಹಿತಿಗೆ ಆದ ಅನುಭವಗಳು ಅವರ ಮನಸ್ಸಿನ ಮೇಲೆ ವಿಶೇಷ ಪ್ರಭಾವವನ್ನು ಬೀರುತ್ತವೆ. ಅವು ಕಾವ್ಯದಲ್ಲಿ ವ್ಯಕ್ತವಾಗುತ್ತವೆ.

ಅವರು ತಮ್ಮದೇ ಆದ ನೆಲೆಯಲ್ಲಿ ಪ್ರತಿಯೊಂದು ವಿಷಯವನ್ನು ನೋಡಿದ್ದಾರೆ. ಅಲ್ಲಿನ ಸಾಮಾಜಿಕ ಚಿಂತನೆಯ ಸಮಾಜದಲ್ಲಿ ಚರ್ಚಿತವಾಗುವ ವಸ್ತು ವಿಷಯಗಳೆಲ್ಲವೂ ಕಾವ್ಯವಾಗಿದೆ. ಧರ್ಮ–ಮಾನವ, ಆತ್ಮ–ಆಧ್ಯಾತ್ಮ, ಮಾನವ ಸಮಾಜ ಇವುಗಳ ಪರಸ್ಪರ ಪೂರಕ ಸಂಬಂಧವು ಅವರ ಕವಿತೆಗಳಲ್ಲಿ ಕಾಣಿಸಿಕೊಂಡಿರುವುದನ್ನು ಇಲ್ಲಿ ತಿಳಿಯಬಹುದು.

ಮಾನವನು ಬದುಕಿನ ಜಂಜಾಟಗಳಿಗೆ ಸಿಕ್ಕಿ ಹೇಗೆ ಬಾಧೆಪಡುತ್ತಾನೆ ತನ್ನ ನಿಜ ಅಸ್ತಿತ್ವವನ್ನು ಉಳಿಸಿಕೊಳ್ಳಲು ಹೇಗೆ ಹೆಣಗಾಡುತ್ತಾನೆ. ಬದುಕಿನ ಭ್ರಮೆಯಲ್ಲಿ ಸಿಲುಕಿ ಹೊರಬರಲಾಗದೆ ಅನುಭವಿಸುವ ವೇದನೆ ಆತ್ಮದ ಉನ್ನತಿಯನ್ನು ಸಾಧಿಸಲು ಹೇಗೆ ತಪನ ಪಡುತ್ತಾನೆ ಎನ್ನುವ ಅಂಶಗಳು ಈ ಕವಿತೆಯಲ್ಲಿರುವುದನ್ನು ತಿಳಿಸುವುದರೊಂದಿಗೆ ಸಮಾಜದಲ್ಲಿ ಜಾಗೃತಿ ಮೂಡಿಸಿದ್ದಾರೆ. ಈ ವಿಷಯಗಳನ್ನು ಇಲ್ಲಿ ಗುರುತಿಸಲಾಗಿದೆ.

ಆಧ್ಯಾತ್ಮದ ನೆಲೆಯಲ್ಲಿನ ಕವಿತೆಗಳು ಮುಖ್ಯವಾಗಿ ಆತ್ಮದ ಸಾಕ್ಷಾತ್ಕಾರದತ್ತ ಬದುಕಿನ ನಿಜಗಮ್ಯದತ್ತ ಯಾತ್ರೆ ಕೈಗೊಳ್ಳುವ ಹಾದಿಯಲ್ಲಿ ಮಾವನಿಗೆ ಅಡ್ಡಿಪಡಿಸುವ ಅಂಶಗಳ ಬಗ್ಗೆ ತಿಳಿಸುತ್ತವೆ. ಆಸೆ ಹೇಗೆ ಆತ್ಮದ ಉನ್ನತಿಗೆ ಅಡ್ಡಿ ಉಂಟು ಮಾಡುವುದು ಎನ್ನುವುದನ್ನು ಇಲ್ಲಿ ತಿಳಿಸಿದೆ. ಸಮಾಜವನ್ನು ಅಧಃಪತನದತ್ತ ಸಾಗಲು ಆಸೆ ಎಂಬುದು ಒಂದು ಮುಖ್ಯ ಕಾರಣವಾಗಿದೆ.

ಕಾಮ, ಕ್ರೋಧ, ಲೋಭ, ಮದ, ಮತ್ಸರಗಳೆಂಬ ಭಾವವಗಳು ಹೇಗೆ ಮಾನವನ್ನು ಬೇಗುದಿಗೆ ತಳ್ಳುತ್ತವೆ ಎಂಬ ನೆಲೆಯಲ್ಲಿ ಚಿತ್ರಿಸಿದ್ದಾರೆ. ಈ ಮಾನಸಿಕ ತೊಳಲಾಟ ಮಾನವನನ್ನು ಶೂನ್ಯದೆಡೆಗೆ ಯಾವುದೋ ಅರಿಯದ ಆತಂಕದೆಡೆಗೆ ಹೇಗೆ ನೂಕುತ್ತದೆ ಎಂಬುದನ್ನು ರಾಗೌ ಅವರು ತಮ್ಮ ಕಾವ್ಯಗಳಲ್ಲಿ ಚಿತ್ರಿಸಿದ್ದಾರೆ. ಆಧ್ಯಾತ್ಮ ಮತ್ತು ಆತ್ಮ ನಿವೇದನೆಯನ್ನು ಕುರಿತಂತೆ ರಚಿತವಾದ ಕವಿತೆಗಳು ಅವರ ಸಮಗ್ರ ಕಾವ್ಯದಲ್ಲಿ ಅನಾವರಣಗೊಂಡಿವೆ.

ಮಾನವನು ಸಮಾಜ ಜೀವಿಯಾಗಿದ್ದರೂ ಸಹ ಕೇವಲ ಸಾಮಾಜಿಕ ಬದುಕಿಗೆ ಅಂಟಿಕೊಳ್ಳದೆ ಆಧ್ಯಾತ್ಮದ ಅನುಭವವನ್ನು ಪಡೆದುಕೊಳ್ಳಬೇಕೆಂದು ತಮ್ಮ ಕೆಲ ಕವಿತೆಗಳಲ್ಲಿ ತಿಳಿಸಿದ್ದಾರೆ. ಜೀವನದ ಪಯಣವು ನಿರಂತರ ಯಾತ್ರೆಯಾಗಿದ್ದು ಈ ಯಾತ್ರೆಯು ಅರ್ಥಪೂರ್ಣವಾಗಿರಬೇಕು. ಅದಕ್ಕೆ ದೈವದ ಗುರುವಿನ ರಕ್ಷೆ, ಆಸರೆ, ಅನುಗ್ರಹ, ಮುಖ್ಯ ಎಂಬ ಅಂಶಗಳ ಬಗ್ಗೆ ತಿಳಿಸಿರುವುದನ್ನು ಕಾಣಬಹುದು.

ಮಾನವ ಬದುಕಿನ ಯಾತ್ರೆಯಲ್ಲಿ ಕೇವಲ ಲೌಕಿಕ ಬದುಕಿನ ಸಾರ್ಥಕತೆಯಲ್ಲದೆ, ಪಾರಮಾರ್ಥಿಕ ಉನ್ನತಿಯನ್ನು ಸಾಧಿಸುವುದು ಮುಖ್ಯ ಎಂಬ ಅಭಿಪ್ರಾಯವು ಕೆಲವು ಕಡೆಗಳಲ್ಲಿ ವ್ಯಕ್ತವಾಗಿದೆ ಎಂಬುದನ್ನು ಓದುಗರು ಗಮನಿಸಬಹುದಾಗಿದೆ.

# ಗ್ರಂಥಋಣ


## ಅನುಬಂಧ-೧

### ಆಕರ ಗ್ರಂಥಗಳು

೧. ಡಾ. ರಾಗೌ ಸಮಗ್ರ ಕಾವ್ಯ –
ವಿಜಯಲಕ್ಷ್ಮೀ ಪ್ರಕಾಶನ, ಮೈಸೂರು.

## ಅನುಬಂಧ-೨

೧. ಅಭಿಜಾತ : ರಾಗೌ ಅಭಿನಂದನಾಗ್ರಂಥ –
ಸಂಪಾದಕರು ಕ್ಯಾತನಹಳ್ಳಿ ರಾಮಣ್ಣ,
ಡಾ. ಎ.ರಂಗಸ್ವಾಮಿ, ಡಾ. ಬೋರೇಗೌಡ, ಚಿಕ್ಕಮರಳಿ –
ರೂಪಾ ಪ್ರಕಾಶನ – ಮೈಸೂರು, ೨೦೧೨

೨. ರಾಗೌ ಕಾವ್ಯ ವಿಮರ್ಶೆ – ಡಾ. ಬೆಳ್ಳೂರು ವೆಂಕಟಪ್ಪ –
ಡಾ.ಎಂ.ಭೈರೇಗೌಡ
ಪ್ರಗತಿ ಗ್ರಾಫಿಕ್ಸ್-ಬೆಂಗಳೂರು. ೨೦೦೯

೩. ಡಾ. ರಾಗೌ ವ್ಯಕ್ತಿ-ಅಭಿವ್ಯಕ್ತಿ-
ಡಾ. ಬೋರೇಗೌಡ ಚಿಕ್ಕಮರಳಿ-
ಅವಿನಾಶ್ ಪ್ರಕಾಶನ, ಮಂಡ್ಯ. ೨೦೦೯

೪. ಡಾ. ರಾಗೌ : ವ್ಯಕ್ತಿ ಮತ್ತು ಸಾಹಿತ್ಯ
(ವಿಚಾರ ಸಂಕಿರಣ ಮಾಲೆ) ಸಂಪಾದಕರು
ಡಾ.ಬೋರೇಗೌಡ ಚಿಕ್ಕಮರಳಿ,
ಡಾ. ಮ.ರಾಮಕೃಷ್ಣ, ಕರ್ನಾಟಕ ಸಾಹಿತ್ಯ ಅಕಾಡೆಮಿ,
ಬೆಂಗಳೂರು. ೨೦೧೨